

ವಿಜಯ ರವರ...

# ಪಾತಾಳ ಭೈರವಿ

*Direction*

**K.V. REDDI, B.Sc. (HONS)**



*Produced by* - **NAGI REDDI-CHAKRAPANI**

## ಈ ಸಂಚಿಕೆಯಲ್ಲಿ


| ವಿಷಯಗಳು | ಪುಟ |
|---|---|
| ರಕ್ಷೆ | 9 |
| ರಾಮರಾಜ್ಯದಲ್ಲಿ | 10 |
| ಬಡವನ ಹರುಷ | 12 |
| ಕುಟ್ಟಿಕಣ್ಣನ ಹುಟ್ಟಿದ ಹಬ್ಬ | 13 |
| ಅವಳಿ ಮಕ್ಕಳ ಕಥೆ | 17 |
| ಜೇನಿನ ದಿಬ್ಬ | 25 |
| ಪತಿವ್ರತೆಯರ ಸಭೆ | 29 |
| ಪಂಡಿತರಾಯ | 33 |
| ಮರದ ಪೆಟ್ಟಿಗೆ | 39 |
| ಕಂಡೂರಿ ಕಲ್ಪತರು | 42 |
| ಏಕೆ ಗೊತ್ತೆ ? | 47 |


ಇವಲ್ಲದೆ ಸ್ಪರ್ಧೆ, ಒಗಟು, ನಗೆಹನಿ, ಇತ್ಯಾದಿಗಳು.


# ಡೋಂಗರೇ ಬಾಲಾಮೃತ

ಇದು ಸೊರಗಿ ಕಡ್ಡಿಯಂತಾದ ಚಿಕ್ಕ ಮಕ್ಕಳಿಗೆ ಆರೋಗ್ಯವನ್ನೂ ಪುಷ್ಟಿಯನ್ನೂ ಬಲವನ್ನೂ ಕೊಡುತ್ತದೆ. ಇದರ ಸೇವನೆಯಿಂದ ಮಕ್ಕಳ ಹಲ್ಲುಗಳು ಕಷ್ಟವಿಲ್ಲದೆ ಹೊರಬೀಳಲು ಸಹಾಯವಾಗುತ್ತದೆ.

ಹೊಸಮಾದರಿ ಡಿಸೈನುಗಳುಳ್ಳ ಅತಿ ಆಕರ್ಷಕ ಕೈ ಗಡಿಯಾರಗಳು
5 ವರ್ಷ ಗ್ಯಾರಂಟಿ.













No. 22 ಮನೋಹರ ಡಿಸೈನುಳ್ಳ ಪಾಕೆಟ್ ವಾಚು Rs. 13/-

ಸರಕು ಸ್ವಲ್ಪವೇ ಮಿಕ್ಕಿದೆ. ಈಗಲೇ ಬರೆಯಿರಿ. ರೋಲ್ಡ್ ಗೋಲ್ಡ್ ಕೇಸುಗಳಿಗೆ ರೂ. 5/- ಪ್ರತ್ಯೇಕ.

**HILSON WATCH CO., (C.M.)**
**BARA, KOTHI MEM, DELHI.**



ಈಗ ದೊರಕುತ್ತೆ!!
ಅಮೆರಿಕನ್ ಮಾಡೆಲ್ ರೋಲ್ ಫಿಲಿಮ್ ಬಾಕ್ಸ್ ಕೆಮೆರಾ

ಒಳ್ಳೆಯ ಪವರು ಲೆನ್ಸೂ ಮತ್ತು ವ್ಯೂಫೈಂಡರ ನೊಡಗೂಡಿರುವ ಅತ್ಯುತ್ತಮವಾದ ಈ ಕೆಮೆರಾ ಬಹಳ ಅಗ್ಗ. ಅಭ್ಯಾಸಿಗರು ಸಹ ಉತ್ತಮ ರೀತಿಯಲ್ಲಿ ಉಪಯೋಗಿಸಬಹುದು. ನಂ. 120 ಫಿಲಿಂನಲ್ಲಿ 2¼"×3¼" ಸೈಜಿನ ಅದ್ಭುತ ಫೋಟೋಗಳನ್ನು ತೆಗೆಯಬಹುದು. ಫೋಟೋ ತೆಗೆಯುವ ವಿಧಾನದೊಂದಿಗೆ ಬೆಲೆ ರೂ. 10-8-0 ಪ್ಯಾಕಿಂಗ್ ಪೋಸ್ಟೇಜುಗಳಿಗೆ ರೂ. 1-8-0 ಪ್ರತ್ಯೇಕ. ಕೆಮೆರಾಗೆ ಸರಿಪಡುವಂತಹ ಲೆದರ್ ಕೇಸ್, ರೂ. 3-8-0. ಸರಕು ಸ್ವಲ್ಪ ಮಾತ್ರವಿದೆ. ಇಂದೇ ಆರ್ಡರ್ ಕೊಡಿರಿ.

ಪತ್ರ ವ್ಯವಹಾರ ಇಂಗ್ಲಿಷಿನಲ್ಲಿ.

**BENGAL CAMERA HOUSE (108 C.M.)**
**P. O. 21 ALIGARH U. P.**

MORTON..

ಮಿ ಠಾ ಯಿ ಗ ಳ ಲ್ಲೆ ಲ್ಲಾ
ಅತ್ಯಂತ ಸಿಹಿ ಮಿಠಾಯಿ




C. & E. MORTON (INDIA) LTD.

MAKERS OF QUALITY CONFECTIONERY
INCLUDING
Cream Toffees, Fruit Centered Sweets, Barley Sugar
Lollies, Satin Confectionery, Peppermint-lozenges etc.

ASP.M

ಸೋಲ್ ಏಜೆಂಟರು :

ಸೌತ್ ಇಂಡಿಯಾ ಕಾರ್ಪೊರೇಷನ್ (ಮದ್ರಾಸು) ಲಿಡ್.,

80, ಶಂಭುದಾಸ್ ಬೀದಿ, ಮದರಾಸು - 1 (ದ. ಇಂಡಿಯಾ)









# 500 ರೂಪಾಯಿಗಳ ಬಹುಮಾನ

## ಉಮಾ ಗೋಲ್ಡ್ ಕವರಿಂಗ್ ವರ್ಕ್ಸ್

ಉಮಾ ಮಹಲ್ : : ಮಚಲೀಪಟ್ಟಣ

ಉಮಾ ಗೋಲ್ಡ್ ಕವರಿಂಗ್ ವರ್ಕ್ಸ್ ಪೋಸ್ಯಾಫೀಸ್ ಅಪ್ಪಟ ಬಂಗಾರದ ರೇಕನ್ನು ಲೋಹದ ಮೇಲೆ ಅಂಟಿಸಿ (Gold Sheet Welding on Metal) ತಯಾರು ಮಾಡುತ್ತೇವೆ. ಅಲ್ಲವೆಂದ ರುಜುವಾತು ಮಾಡಿದವರಿಗೆ ರೂ. 500 ಬಹುಮಾನ ಕೊಡುತ್ತೇವೆ. ನಾವು ತಯಾರಿಸಿ ಕಳಿಸುವ ಪ್ರತಿ ವಸ್ತು ಮತ್ತು ಪ್ಯಾಕಿಂಗಿನ ಮೇಲೆ "ಉಮಾ" ಎಂಬ ಇಂಗ್ಲೀಷು ಅಕ್ಷರದ ಗುರುತನ್ನು ನೋಡಿ ತೆಗೆದುಕೊಳ್ಳಿ. ಹತ್ತು ವರ್ಷಗಳ ಗ್ಯಾರಂಟಿಯುಂಟು.

ಇದನ್ನು ಪರೀಕ್ಷೆ ಮಾಡಲಿಚ್ಛಿಸುವವರು ಉಮಾ ಆಭರಣಗಳನ್ನು ಮಹಾ ದ್ರಾವಕದಲ್ಲಿ ಇಟ್ಟ 5 ನಿಮಿಷದಲ್ಲೇ ಬಂಗಾರದ ರೇಕು ಲೋಹದಿಂದ ಬೇರೆಯಾಗಿ ಬರುತ್ತದೆ. ಹೀಗೆ ಪರೀಕ್ಷೆ ಮಾಡಿದ ಅನೇಕ ಮಹನೀಯರು ನಮಗೆ ಸರ್ಟಿಫಿಕೇಟುಗಳನ್ನು ಕೊಟ್ಟಿರುವರು. 800 ಡಿಸೈನುಗಳುಳ್ಳ ನಮ್ಮ ಕ್ಯಾಟಲಾಗು ಉಚಿತವಾಗಿ ಕಳುಹಿಸುತ್ತೇವೆ.

ಇತರ ದೇಶಗಳಿಗೆ ಕ್ಯಾಟಲಾಗು ದರಕ್ಕೆ 25% ಅಧಿಕ ಬೆಲೆಯಾಗುತ್ತೆ.

N.B.- ವಸ್ತುಗಳ ವಿ. ಪಿ. ಪಾರ್ಸಲು ಛಾರ್ಜು ರೂ. 0-5-0

Tel : "UMA" Masulipatam.



## ಮುದ್ದಿನಗೊಂಬೆಯಂತಹ ಮಕ್ಕಳು ನಿಮಗೆ ಬೇಕೆ?

ನಮ್ಮ "ಶುಭೊ" (SUBHO) ವನ್ನು ಗರ್ಭವತಿಯರು ಸೇವಿಸಿದರೆ ಮುತ್ತಿನಂತಹ ಮಕ್ಕಳು ಹುಟ್ಟುತ್ತಾರೆ. ಮಗು ಬಾಣಂತಿಯರ ಅಂದ ಚಂದಗಳನ್ನು ಕಾಪಾಡಿ ಒಳ್ಳೆ ಆರೋಗ್ಯ ಕೊಡುವ ಬಲವರ್ಧಕ ಔಷಧ (Tonic). 'ಶುಭೊ' ಶೀಘ್ರ ಪರಿಣಾಮಕಾರಿ. ರುಚಿಕರವಾಗಿದೆ. ಗುಣವು ಗ್ಯಾರಂಟಿ. ತ್ವರೆಯಾಗಿ ಆರ್ಡರು ಕೊಡಿರಿ.

ಬೆಲೆ ರೂ. 3/- ಪೋಸ್ಟೇಜು ಪ್ರತ್ಯೇಕ.

ಪತ್ರ ವ್ಯವಹಾರ ಇಂಗ್ಲಿಷಿನಲ್ಲಿ.

**C. V. R. CORPORATION.**

**POST BOX 735 CALCUTTA.**

TELEGRAMS : 'GOOD HEALTH.'



ಭಾರತೀಯರಿಗೆ ಒಳ್ಳೆ ಬಹುಮಾನ.

ಮನೆಯಲ್ಲಿ ಕುಳಿತುಕೊಂಡೇ

## 14 ಭಾಷೆಗಳನ್ನು ಕಲಿಯಿರಿ.

ಯಾವ ಒಂದು ಭಾಷೆಯಲ್ಲೇ ಆಗಲಿ, ಸ್ವಲ್ಪ ತಿಳುವಳಿಕೆ ಇದ್ದರೆ ಸಾಕು, ನಮ್ಮ '14 ಭಾಷೆಗಳು' ಎಂಬ ಪುಸ್ತಕ ಓದಿ, ಹಿಂದಿ, ಬಂಗಾಳಿ, ಇಂಗ್ಲಿಷು, ಚೈನಾಭಾಷೆ, ಜಪಾನಿ, ಮೊದಲಾದ 14 ಭಾಷೆಗಳನ್ನು ಮನೆಯಲ್ಲಿಯೇ ಕಲಿತುಕೊಳ್ಳಬಹುದು. ಪುಸ್ತಕದ ಬೆಲೆ ರೂ. 2/- ಪೋಸ್ಟೇಜು 12 ಆ. ಪ್ರತ್ಯೇಕ.

## ಕಸೂತಿ ಯಂತ್ರ

ಬಟ್ಟೆಯ ಮೇಲೆ ತರಹೆವಾರಿ ಡಿಸೈನು, ಹೂಬಳ್ಳಿ, ಎಲೆ ಮುಂತಾದುವನ್ನು ಹೊಲಿಯ ಬಲ್ಲ 4 ಸೂಜಿಗಳ ವಿದೇಶೀ ಯಂತ್ರ. ಬೆಲೆ ರೂ.8 (ಪೋಸ್ಟು ಖರ್ಚು 1-4-0 ಪ್ರತ್ಯೇಕ.) ಆರ್ಡರುಗಳು ವಿ. ಪಿ. ಮೂಲಕ ಕಳಿಸಲ್ಪಡುತ್ತವೆ. ಪತ್ರವ್ಯವಹಾರ ಇಂಗ್ಲಿಷಿನಲ್ಲಿ.

**BENGAL TRADERS (C. M. C.)**

**P. O. 21. ALIGARH (U. P.)**

# ಹಿಂದೀ-ಹಿಂದೀ-ಕನ್ನಡ ರತ್ನ ಕೋಶ

ಸಂಪಾದಕರು:—ಶ್ರೀ ಜೆ. ಡಿ. ಮೈಸಾಳೆ

೧೨೦೮ ಪುಟ—೩೫೦೦೦ ಸಾವಿರ ಶಬ್ದ ಸಂಗ್ರಹ—೩ ಲಕ್ಷ ಹಿಂದೀ
ಕನ್ನಡ ಅರ್ಥ ವಿವರಣೆಗಳು, ಹಾಗೂ ಭಾರತ ಶಾಸನ ಶಬ್ದಾವಲಿ ಕೋಶ

ಇದರಲ್ಲಿ ಹಿಂದೀ ಶಬ್ದಕ್ಕೆ ಕೇವಲ ಕನ್ನಡ ಅರ್ಥವನ್ನಷ್ಟೇ ಅಲ್ಲದೆ ಸುಲಭ ಹಿಂದೀ ಅರ್ಥವನ್ನು ಜೋಡಿಸಿರುವುದೇ ಈ "ರತ್ನಕೋಶ"ದ ಹೆಚ್ಚಿನ ಆದರ್ಶ.

ಬೆಲೆ ರೂ. **೮-೧೨-೦** :: ಅಂಚೆ ವೆಚ್ಚ ೦-೧೨-೦

* * * *

## ಹಿಂದೀ ವಿದ್ಯಾರ್ಥಿಗಳಿಗೆ ಒಳ್ಳೇ ಸುಸಂಧಿ

ದಕ್ಷಿಣ ಭಾರತ ಹಿಂದುಸ್ತಾನೀ ಪ್ರಚಾರ ಸಭೆಯ ಪ್ರಾಥಮಿಕ ಮಧ್ಯಮಾ, ರಾಷ್ಟ್ರಭಾಷಾ ಪರೀಕ್ಷೆಗಳಿಗೆ ಉಪಯುಕ್ತವಾಗುವ ಎಲ್ಲ ಗೈಡುಗಳು ದೊರೆಯುತ್ತವೆ. ಬೆಲೆ ಅನುಕ್ರಮವಾಗಿ ೦-೧೪-೦, ೨-೦-೦, ೩-೮-೦ ಅಂಚೆ ವೆಚ್ಚ ಬೇರೆ.

* * * *

ಸಂಗೀತಾಭ್ಯಾಸಿಗಳಿಗೆ ಸವಿಯೂಟ.
ಹಾರ್ಮೋನಿಯಂ ಕಲಿಯುವವರಿಗೆ ಕೈಗಂಬ

## ಸಂಗೀತಾಚಾರ್ಯ

ಲೇಖಕರು:-ಎಸ್. ಎನ್. ಹರಿದಾಸ. ಬೆಲೆ ೧-೪-೦ ಅಂಚೆವೆಚ್ಚ ಬೇರೆ
೨೦ ಪ್ರಮುಖ ಹಿಂದುಸ್ತಾನಿ ರಾಗಗಳನ್ನು ಕನ್ನಡ ಹಾಡುಗಳೊಂದಿಗೆ
ಪರಿಚಯ ಮಾಡಿಕೊಟ್ಟ ಒಂದೇ ಒಂದು ಪುಸ್ತಕ

* * * *

ಪ್ರತಿಯೊಂದು ಮನೆಯಲ್ಲಿಯೂ ಅವಶ್ಯ ಸಂಗ್ರಹಿಸಲೇ ಬೇಕಾದ ಪುಸ್ತಕ
ಸ್ವತಂತ್ರ ಉದ್ಯೋಗ ಕಲಿಯುವವರಿಗೆ ತುಂಬಾ ಅನುಕೂಲ

## ಸಚಿತ್ರ ಹೊಲಿಗೆಯ ಶಿಕ್ಷಣ, ೨ ಭಾಗಗಳು

ಇದರಲ್ಲಿ ಜಂಪರ, ಸ್ತ್ರೀಯರ ಅಂಡರ್‌ವ್ಹೇರ್, ಗಂಡಸರ ಉಡುಪುಗಳ ಅಳತೆಗಳನ್ನು ತೆಗೆದುಕೊಳ್ಳುವದು, ಮಿತವ್ಯಯದಿಂದ ಉಡುಪು ಹೇಗೆ ತಯಾರಿಸುವದು, ಇತ್ಯಾದಿ ಅನೇಕ ಮಾಹಿತಿಯನ್ನು ಆಕೃತಿಗಳಿಂದ ವರ್ಣಿಸಿದೆ.

ಬೆಲೆ ೨-೦-೦ ಅಂಚೆ ವೆಚ್ಚ ಬೇರೆ

ಮೇಲ್ಕಾಣಿಸಿದ ಎಲ್ಲ ಪುಸ್ತಕಗಳು ಎಲ್ಲ ಪುಸ್ತಕ ವ್ಯಾಪಾರಿಗಳಲ್ಲಿ ದೊರೆಯುತ್ತವೆ.

**ಪ್ರಕಾಶಕರು:—ರಾಮಾಶ್ರಯ ಬುಕ್ ಡಿಪೊ, ಧಾರವಾಡ.**

## ರೂ. 5-14 ಕ್ಕೆ ಗೋಲ್ಡನ್ ಬಂಗಾರದ ನಗಗಳು



ಸ್ತ್ರೀಯರಿಗೆ ಆನಂದವೀಯುವ ಹೊಸ ಡಿಸೈನುಗಳುಳ್ಳ ನಾಲ್ಕು ಅಂದವಾದ ಆಭರಣಗಳುಗೋಲ್ಡನ್ ಬಂಗಾರದಲ್ಲಿ ತಯಾರು ಮಾಡಲ್ಪಟ್ಟವೆ. ಬಣ್ಣ ಕಾಂತಿಗಳಲ್ಲಿ ಅಸಲು ಬಂಗಾರದಂತೆಯೇ ಕಾಣಿಸುತ್ತದೆ. ಬಡವರೂ, ಎಲ್ಲಾ ಮತದವರೂ ಉಪಯೋಗಿಸುತ್ತಿರುವರು. ಆಭರಣಗಳ ವಿವರ: ಒಂದು ಜೊತೆ ಡೈಮಂಡ್ ಬಳೆಗಳು, ಒಂದು ಜೊತೆ ಚಂದ್ರಲೇಖ ಸ್ಟಾರ್ ಲೋಲಕು, ಒಂದು 9 ಕಲ್ಲಿನ ಡೈಮಂಡ್ ಉಂಗುರ, ಒಂದು ಸಿನಿಮಾ ಜ್ಯೋತಿ ನೆಕ್‌ಲೇಸು ಚೈನು, ಈ ನಾಲ್ಕು ಆಭರಣಗಳು ಒಂದು ಸುಂದರ ಪೆಟ್ಟಿಗೆಯಲ್ಲಿ ಇಟ್ಟು ಕಳುಹಿಸಲ್ಪಡುತ್ತವೆ.

ಬೆಲೆ ರೂ. 5-14-0. ಖರ್ಚುಗಳು ಪ್ರತ್ಯೇಕ.

ಸ್ಟಾಕು ಸ್ವಲ್ಪಮಾತ್ರ. ಇಂದೇ ಬರೆಯಿರಿ.

**ಸುಷ್ಮಾ ಅಂಡ್ ಕಂಪೆನಿ,** ಪೋಸ್ಟು ಬಾಕ್ಸು ನಂ. 89, **ಮದ್ರಾಸು-1**

**SUSHMA & COMPANY, GOLDEN JEWELLERS,** P. O. Box 89, Madras-1.



## ಆಂಧ್ರಾ ಇನ್ಸೂರೆನ್ಸ್ ಕಂಪೆನಿ, ಲಿಮಿಟೆಡ್

**ಹೆಡ್ ಆಫೀಸು :: ಮಚಲೀಪಟ್ಟಣ.**

ವಿಮಾ ವ್ಯಾಪಾರದಲ್ಲಿ **25** ಸಂವತ್ಸರಗಳು ಜಯಪ್ರದವಾಗಿಯೂ ಸಮರ್ಥತೆಯಿಂದಲೂ ಸೇವೆ ಸಲ್ಲಿಸಿದ ಸಂಸ್ಥೆ.

| | |
|---|---|
| 1950 ರಲ್ಲಿ ನೂತನ ವ್ಯಾಪಾರ .... | 2 ಕೋಟಿ. ರೂ. ಗಳು. |
| ಒಟ್ಟು ವಿಮಾ ನಿಧಿ (ಸುಮಾರು) .... | 1 ಕೋಟಿ 80 ಲಕ್ಷ. ರೂ. ಗಳು. |

ಜೀವ ವಿಮೆ ಮಾತ್ರವಲ್ಲದೆ - ಅಗ್ನಿ - ಮೋಟಾರು ಪ್ರಮಾದ- ನೌಕಾ- ವಿಮಾವ್ಯಾಪಾರಗಳೂ ನಮ್ಮಲ್ಲಿ ಉಂಟು.

ನಮ್ಮ ಆಫೀಸುಗಳು

ಮದ್ರಾಸು, ಬೊಂಬಾಯಿ, ಕಲ್ಕತ್ತಾ, ನಾಗಪುರ, ದೆಹಲಿ, ಬೆಂಗಳೂರು, ಬೆಳಗಾಂ, ಅನಂತಪುರ, ಸಿಕಂದರಾಬಾದ, ಕೊಯಮುತ್ತೂರು, ಬರ್ಹಾಂಪುರ, ಎರ್ನಾಕುಲಂ, ಬೆಜವಾಡ, ಗುಂಟೂರು, ಜಂಶೀದಪುರ, ವಿಶಾಖಪಟ್ಟಣ, ರಾಜಮಹೇಂದ್ರ, ಮಂಗಳೂರು, ದಿಬ್ರುಗರ್, (ಅಸ್ಸಾಂ).



2-2-1951 ರಿಂದ

ಅಮೋಘ ಪ್ರಾರಂಭ

ಜೂಪಿಟರವರ

ಸುಂದರ ಸಾಮಾಜಿಕ ಚಿತ್ರ

# "ಮರ್ಮಯೋಗಿ"

(ತಮಿಳು)

ಅಂಜಲಿ ದೇವಿ : ಮಾಧುರಿ ದೇವಿ : ಸಹಸ್ರನಾಮಂ
ಎಂ. ಜಿ. ರಾಮಚಂದ್ರನ್ :: ನಂಬಿಯಾರ್

ಬೆಂಗಳೂರು :

ಮೂವಿಲ್ಯಾಂಡ್ ಮತ್ತು

ಶಿವಾಜಿ, ನ್ಯೂಅಪೆರಾ

ಕೆ. ಜಿ. ಎಫ್.

ಕೃಷ್ಣಾ ಟಾಕೀಸುಗಳಲ್ಲಿ

ಏಕಕಾಲದಲ್ಲಿ ಪ್ರದರ್ಶನಾರಂಭ

**A TALLAM RELEASE**



ಸಂಪುಟ ೬
ಸಂಚಿಕೆ ೨

ಫೆಬ್ರವರಿ
೧೯೫೧

# ಚಂದಮಾಮ

## ರಕ್ಷೆ ★ ★

— ಶ್ರೀ ಕಲಾಕುಮಾರ.

ಸಮರದಿಂದ ಶಾಂತಿ ಇಲ್ಲ;
ಶತ್ರು ಮಿತ್ರನಾಗಲಿ
ನಾವು ಅವರು ಬೇರೆಯಲ್ಲ
ಮನಸು ಮಮತೆ ಕೂಡಲಿ

ನಮ್ಮ ನಾಡು, ಅವರ ನಾಡು
ಎಲ್ಲ ಒಂದು ಸೇರಲಿ
ವಿಶ್ವಕೊಂದು ದಾರಿ ತೋರಿ
ಜಗದ ಕ್ಷೇಮ ಬೆಳೆಸಲಿ

ನ್ಯಾಯ ಸತ್ಯ ನಮ್ಮ ಶಕ್ತಿ
ಸರುವ ಸಮತೆ ಬೆಳೆಯಲಿ
ಸತ್ಯ ಸಮತೆ ಜಗದ ಹಿತದ
ಮೊದಲ ಮೆಟ್ಟಲಾಗಲಿ

ದೇವ ಪೊರೆಯೊ ನಮ್ಮ ನಾಡ
ಸ್ವರ್ಗಸೀಮೆಯಾಗಲಿ
ಶಾಂತಿ ಬೆಳೆದು ದೇಶಕೆಲ್ಲ
ಅದೇ ರಕ್ಷೆಯಾಗಲಿ.





# ರಾಮರಾಜ್ಯದಲ್ಲಿ

ಪೂರ್ವದಲ್ಲಿ ಅಯೋಧ್ಯೆಯಲ್ಲಿ ಶ್ರೀ ರಾಮಚಂದ್ರನು ಆಳುತ್ತಿದ್ದನು. ಆತನು ರಾಜ್ಯದಲ್ಲಿ ಶಾಂತಿ ಸುವ್ಯವಸ್ಥೆಗಳು ಚೆನ್ನಾಗಿ ನೆಲೆಸಿದ್ದವು. ಆಗ ಕಳವು ಮೋಸ ಸುಲಿಗೆ ದರೋಡೆಗಳು ಹೇಳ ಹೆಸರಿಲ್ಲದಂತಾಗಿತ್ತು. ಈಗಿನಂತೆ ಅನ್ಯಾಯ ಕದನ ಜಗಳಗಳು ಆಗುತ್ತಿದ್ದಿಲ್ಲ. ರಾಜನಲ್ಲಿ ದೂರುಗಳು ಬರುವದು ಅಪರೂಪವಾಗಿತ್ತು. ಒಮ್ಮೆ ಬಂದರೂ ರಾಮನ ನ್ಯಾಯ ನಿರ್ಣಯ ಮಾಡುವಿಕೆಯು ಮಾದರಿಯದಾಗಿತ್ತು.

ಒಮ್ಮೆ ಬಡ ಹಾರುವನೊಬ್ಬನು ಭಿಕ್ಷೆ ಬೇಡುತ್ತ ಅಯೋಧ್ಯಾ ನಗರವನ್ನು ಪೂರಾ ತಿರುಗಿದನು. ಅವನ ಅದೃಷ್ಟ, ಮಧ್ಯಾಹ್ನವಾದರೂ ಒಂದು ಹಿಡಿ ಅಕ್ಕಿಯಾಗಲಿ ಎರಡು ಕಾಸಾಗಲಿ ದೊರೆಯಲಿಲ್ಲ. ಬಿಸಿಲಿನ ಬೇಗೆಗೆ ಬೆಂದು ತಳಮಳಿಸಹತ್ತಿದನು. ಹಸಿವಿನ ಸಂತಾಪದಿಂದ ಸಂಕಟ ಪಡುತ್ತಾ ಅಡ್ಡಾಡುತ್ತಿರುವಾಗ ದಾರಿಯಲ್ಲಿ ಒಂದು ನಾಯಿ ಕಣ್ಣಿಗೆಬಿತ್ತು. ಥಟ್ಟನೆ ಏನು ತೋರಿತೋ, ಅಥವಾ ಚಿಂತೆಯಿಂದ ಬುದ್ಧಿ ಭ್ರಮಣವಾಯಿತೋ, ಏನೋ, ಒಂದು ಕೋಲು ತೆಗೆದುಕೊಂಡು ಘಟ್ಟಿಯಾಗಿ ನಾಯಿಯ ಕಾಲ ಮೇಲೆ ಏಟು ಹೊಡೆದನು. ನಾಯಿಗೆ ಸಖೇದ ಆಶ್ಚರ್ಯವುಂಟಾಯಿತು. ನಿರಪರಾಧಿಯಾದ ನನಗೇಕೆ ಹೊಡೆದ? ಎಂದು ಚಿಂತಿಸಿತು.

ಶ್ರೀ ರಾಮನಲ್ಲಿ ದೂರು ಒಯ್ಯಲು ನಿಶ್ಚಯಿಸಿ ಮಹಾದ್ವಾರದ ಬಳಿ ಬಂದು ಘಟ್ಟಿಯಾಗಿ ಒದರಿತು. ಬಾಗಿಲು ಕಾಯುವವರು ರಾಮನಲ್ಲಿ ಹೋಗಿ ಈ ಸಂಗತಿ ತಿಳಿಸಿದರು. ನಾಯಿಗೆ ಸಭಾ ಸ್ಥಾನಕ್ಕೆ ಕರೆದು ತರುವಂತೆ ರಾಮನು ಆಜ್ಞೆ ಕೊಟ್ಟನು. ನಾಯಿ ಒಳಗೆ ಬಂದು ರಾಮನಿಗೆ ನಮಸ್ಕರಿಸಿ ನಿಂತುಕೊಂಡಿತು. ಪಶುಪಕ್ಷಿಗಳ ಭಾಷೆ ರಾಮನಿಗೆ ಗೊತ್ತಿತ್ತು. ಬಂದ ಕಾರಣವನ್ನು ರಾಮನು ನಾಯಿಗೆ ಕೇಳಿದನು. ಆಗ ನಾಯಿಯು "ಸ್ವಾಮೀ ನಾನು ಮಾರ್ಗದಲ್ಲಿ ಸುಮ್ಮನೆ ಮಲಗಿದ್ದಾಗ ವಿನಾಕಾರಣವಾಗಿ ಓರ್ವ ವಿಪ್ರನು ನನ್ನ ಕಾಲಿಗೆ ಹೊಡೆದನು. ನ್ಯಾಯ ವಿಚಾರ ಮಾಡಬೇಕು" ಎಂದು ತನ್ನ ಭಾಷೆ

ಎಲ್. ಜಿ. ಭಟ್ಟಬಾಡ.

ಯಲ್ಲಿ ತಿಳಿಸಿತು. ಆಗ ರಾಮನು "ಆತನನ್ನು ತೋರಿಸುವಿಯಾ?" ಎಂದು ಕೇಳಿ ಆ ಬ್ರಾಹ್ಮಣನನ್ನು ಕರೆತರಲು ನಾಯಿಯ ಸಂಗಡ ಸೇವಕರನ್ನು ಕಳಿಸಿದನು. ಸೇವಕರು ಆ ಬ್ರಾಹ್ಮಣನನ್ನು ರಾಮನ ಮುಂದೆ ತಂದು ನಿಲ್ಲಿಸಿದರು.

ರಾಮನು "ಅಯ್ಯಾ, ಬ್ರಾಹ್ಮಣನೇ ಈ ನಾಯಿಗೆ ಯಾವ ಕಾರಣಕ್ಕಾಗಿ ಹೊಡೆದೆ?" ಎಂದು ಕೇಳಿದನು. ಆಗ ಆ ಬ್ರಾಹ್ಮಣನು "ಏನು ಹೇಳುವುದು ಸ್ವಾಮಿ? ರಾಮರಾಜ್ಯವಂತೆ; ಎಲ್ಲರಿಗೂ ಸುಖವಿದೆಯಂತೆ; ದಾನಧರ್ಮಗಳು ನಡೆಯುವದಂತೆ; ಎಂಬ ಹೇಳಿಕೆ ತುಂಬಾ ಹಬ್ಬಿದೆಯಾದರೂ ಇಂದು ಬೆಳಿಗಿನಿಂದ ನನಗೆ ಒಂದು ಹಿಡಿ ಅಕ್ಕಿಯನ್ನು ಯಾರೂ ನೀಡಲಿಲ್ಲ. ಹಸಿವಿನಿಂದ ಕಂಗೆಟ್ಟ ನಾನು ಕೋಪ ಬೇಸರಗಳಿಂದ ನಿನ್ನ ರಾಜ್ಯದ ಕಾನೂನುಗಳ ಅರಿವಿಲ್ಲದೆ ಈ ನಾಯಿಗೆ ಬಡಿದಿದ್ದು ನಿಜ. ನಿನ್ನ ಮನಸ್ಸಿಗೆ ಬಂದ ಶಿಕ್ಷೆ ವಿಧಿಸಬಹುದು" ಎಂದು ಹೇಳಿದನು.

ರಾಮರಾಜ್ಯದಲ್ಲಿ ಬ್ರಾಹ್ಮಣರು ಶಿಕ್ಷೆಗೆ ಅರ್ಹರಲ್ಲವೆಂದಿತ್ತು. ರಾಮಚಂದ್ರನು ಆಗ ಪುನಹ ನಾಯಿಗೆ "ಈ ಹಾರುವನಿಗೇನು ಶಿಕ್ಷೆ ಮಾಡಬೇಕು?" ಎಂದು ಕೇಳಿದನು. ಆಗ ನಾಯಿಯು "ಪ್ರಭೋ, ಯಾವದಾದರೊಂದು ಮಠದಲ್ಲಿಯಾಗಲಿ, ಅನ್ನಸತ್ರದಲ್ಲಿಯಾಗಲಿ ಈತನನ್ನು ಮುಖ್ಯಾಧಿಕಾರಿಯನ್ನಾಗಿ ಮಾಡಿರಿ. ಇದೇ ಆತನಿಗೆ ಶಿಕ್ಷೆ" ಎಂದಿತು. ನೆರೆದವರಿಗೆಲ್ಲ ಆಶ್ಚರ್ಯವಾಯಿತು. "ತಪ್ಪಿಗೆ ಪ್ರತಿಯಾಗಿ ಶಿಕ್ಷೆ ಮಾಡನೆ ಹೀಗೇಕೆ ಹೇಳಿದೆ?" ಎಂದು ಪುನಃ ರಾಮನು ನಾಯಿಗೆ ಪ್ರಶ್ನಿಸಿದನು. ಆಗ ನಾಯಿಯು "ಸ್ವಾಮಿ, ಹಿಂದಿನ ಜನ್ಮದಲ್ಲಿ ನಾನೊಬ್ಬ ಮಠಾಧಿಕಾರಿಯಾಗಿದ್ದೆ. ಹಿಂದು ಮುಂದು ಯೋಚಿಸದೆ ಸಾರ್ವಜನಿಕರ ಹಣ ತಿಂದು ತಿಂದು ಈ ಜನ್ಮದಲ್ಲಿ ನಾಯಿಯಾಗಿದ್ದೇನೆ. ಎಲ್ಲರಿಂದ ಒದೆ ತಿನ್ನುತ್ತಿದ್ದೇನೆ. ಅದಕ್ಕಾಗಿ ಈ ಬ್ರಾಹ್ಮನಿಗೂ ಮಠಾಧೀಶನನ್ನಾಗಿ ಮಾಡಿದರೆ ನನ್ನಂತೆಯೇ ಮಾಡಿ ಮುಂದಿನ ಜನ್ಮಕ್ಕೆ ನಾಯಿಯಾಗುವನು. ಆಗ ಈತನಿಗೆ ನಾಯಿಯ ಕಷ್ಟದುಃಖಗಳ ಅರಿವಾದೀತು" ಎಂದಿತು. ಎಲ್ಲರೂ ಈ ನಿರ್ಣಯ ಕೇಳಿ ಅವಾಕ್ಕಾಗಿ ನಿಂತರು. ಶ್ರೀ ರಾಮಚಂದ್ರನಾದರೂ ನಾಯಿ ಹೇಳಿಕೆಯಂತೆ, ಆ ಬ್ರಾಹ್ಮಣನನ್ನು ಒಂದು ಮಠದ ಅಧಿಕಾರಿಯನ್ನಾಗಿ ಮಾಡಿದನು.



## ಬಡವನ ಹರುಷ

ಒಂದು ದಿನ ಸಂಜೆಯಾ ಚಂದವನು ನೋಡುತ್ತ
ತಂದೆಯೂ ಕಂದನೂ ಪೋಗುತಿರಲು,
ಒಂದು ಕೆರೆ ದಂಡೆಯಲಿ ಒಂದು ಹರಕಂಗಿಯನು
ಕಂಡು ಕಂದನು ಎಂದ ತಂದೆಗಿಂತೆಂದು

" ನೋಡಪ್ಪ ಅಂಗಿಯನು ನೋಡು, ಏನೋ ಕೆಲಸ
ಮಾಡಲಿಕೆ ಪೋಗಿರುವನಂಗಿಯ-ವನು.
ಓಡಿ ನಾನಾ ಅಂಗಿ ತೋಡಿನೊಳಗಡಗಿಪೆನು
ನೋಡೋಣ ಅಡಗಿದ್ದು ಅವನ ಪರಿಯ "

ತಂದೆಯೆಂದನು—" ಬೇಡ ಕಂದ, ಕೇಳವ ಬಡವ
ಹೊಂದಿಸಲು ಬಾರದಾತನ ದುಗುಡದಿ
ನೊಂದವನ ದುಃಖದಾ ಚೆಂದ ಬೇಡೆಮಗೆ, ನಾ
ವಿಂದವನ ಹರುಷ ವದನವ ನೋಡುವ"

ನುಡಿದಿಂತು ತಂದೆ ಮಗನೊಡನೆ ನಾಣ್ಯವನೊಂದ
ಬಡವನಾ ಅಂಗಿ ಜೇಬೊಳಗಿರಿಸಿದ.
ಕಡೆಗೆ ಸರಿದರು, ಮರಗಳೆಡೆಯೊಳಗೆ ಅಡಗಿದರು,
ಬಡವ ಬಂದನು ತನ್ನ ಅಂಗಿಯೆಡೆಗೆ

ಮೈಗೆ ತೊಡಲಂಗಿಯನು, ಕೈಗೆ ದೊರಕಿತು ನಾಣ್ಯ,
ಆಗಳಚ್ಚರಿಯಿಂದ ಹರುಷದಿಂದ,
ಹೇಗೆ ಬಂತಿದು ಎಂದು ನಾಗಡೆಗಳನು ನೋಡಿ,
ಮೇಗೆ ಕೈ ಜೋಡಿ ಬೇಡಿದ ದೇವನೊಳ್

"ಅರಿತೆನ್ನ ಬಡತನವ ಕರುಣಿಸೀ ನಾಣ್ಯವನು,
ತೆರಳಿದಾ ಶ್ರೀಮಂತರನು ದೇವನೇ
ನಿರುತ ಮಂಗಳವಿತ್ತು ನೆರೆಕಾಯೊ !" ಎಂದವನು
ಹರಸಿ ಹರುಷದೆ ಪೋದ ತನ್ನ ಮನೆಗೆ

ತಂದೆಯೆಂದನು " ನೋಡು ಕಂದ, ಬಡವನು ಹರುಷ
ದಿಂದ ನಮಗಾಗಿ ಬೇಡಿದ ಹರಕೆಯು;
ನೊಂದಿಸದೆ ಬಡವರನು ಹೊಂದಿಸಲು ಸಂತಸದಿ
ಮುಂದೆ ಶುಭವೀವನಾ ತಂದೆ ದೇವ"

—" ನವಗಿರಿನಂದ "




ಮದರಾಸಿನ ಮಾಂಬಲಂನಲ್ಲಿ ಸೇತೂರಾಮಯ್ಯ ಅಂತ ಒಬ್ಬಾತ ಇದ್ದ. ಆತನೊಬ್ಬ ಹಣವಂತ. ಆತನಿಗೆ ಎಗ್ಮೊರಿನಲ್ಲಿ ಏಳು, ತಂಡಿಯಾರ ಪೇಟೆಯಲ್ಲಿ ಒಂಬತ್ತು, ಪರಶುವಾಕದಲ್ಲಿ ಹತ್ತು, ಮುತ್ಯಾಲಪೇಟೆಯಲ್ಲಿ ಮೂರು, ಒಟ್ಟು ಇಪ್ಪತ್ತೊಂಬತ್ತು ಮನೆಗಳಿದ್ದವು. ಆತನು ಪ್ರತಿ ತಿಂಗಳೂ ಬಾಡಿಗೆದಾರರ ಕತ್ತಿನ ಮೇಲೆ ಕುಳಿತುಕೊಂಡು ತಗಾದೆ ಮಾಡಿ ಬಾಡಿಗೆ ವಸೂಲು ಮಾಡಿಕೊಂಡು ಬರುವುದೆಷ್ಟೋ ಅಷ್ಟೇ ಹೊರತು, ಆ ಮನೆಗಳಿಗೆ ಬೇಕಾದ ರಿಪೇರಿ ಮಾಡಿಸುವ ಪಾಪಕ್ಕೆ ಹೋಗುತ್ತಿರಲಿಲ್ಲ. ಅಷ್ಟೇಅಲ್ಲದೆ ಮನೆಗೆ ಹೊಸಗಿರಾಕಿ ಯಾರಾದರೂ ಬಂದಾಗಲೆಲ್ಲಾ ಮನೆಯ ಬಾಡಿಗೆಯನ್ನು ಹೆಚ್ಚು ಮಾಡುತ್ತಿದ್ದ. 'ಕೊಡಲಾರೆವು' ಎಂದವರನ್ನು 'ಮನೆ ಖಾಲಿ ಮಾಡಿಹೋಗಿ' ಎಂದು ಹೇಳುತ್ತಿದ್ದ. ಯಾರಾದರೂ ಎದುರು ಬಿದ್ದರೆ ಅವರ ಮನೆ ಎಲೆಕ್ಟ್ರಿಕ್ ತಂತಿಗಳನ್ನು ಕತ್ತರಿಸಿಯೋ, ಕೊಳಾಯಿಯನ್ನು ಕಿತ್ತು ಹಾಕಿಯೋ, ಒಂದಲ್ಲ ಒಂದು ರೀತಿಯಲ್ಲಿ ತೊಂದರೆ ಪಡಿಸಿ, ಹೇಗೋ ತನ್ನ ಕೆಲಸ ಸಾಧಿಸಿಕೊಳ್ಳುತ್ತಿದ್ದ ಆ ಆಸಾಮಿ.

ಸೇತೂರಾಮಯ್ಯನಿಗೆ ಅನೇಕ ಮನೆಗಳು ಇದ್ದುದರಿಂದ ಬಾಡಿಗೆ ವಸೂಲಿ ಮಾಡುವಾಗ ಎಲ್ಲಿ ಯಾವ ಮನೆ ಮರೆತು ಬಿಡುವೆನೋ ಎಂಬ ಭಯದಿಂದ ಆತನೊಂದು ಕೆಲಸ ಮಾಡುತ್ತಿದ್ದ. ತನ್ನ ಇಪ್ಪತ್ತೊಂಬತ್ತು ಮನೆಗಳಲ್ಲಿ ಬಾಡಿಗೆಗೆ ಇರುವವರ ಪಟ್ಟಿಯನ್ನು ಅವರವರ ಹೆಸರುಗಳೊಂದಿಗೆ ಸಿದ್ಧ ಮಾಡಿಟ್ಟುಕೊಂಡಿದ್ದು. ಪ್ರತಿಯೊಬ್ಬನ ಹೆಸರಿನ ಎದುರಾಗಿ ಆತನು ಕೊಡಬೇಕಾದ ಬಾಡಿಗೆ ಬರೆದಿಟ್ಟುಕೊಂಡು, ಆ ಪ್ರಕಾರ ಅವರಿಂದ ತಿಂಗಳು ತಿಂಗಳು ನಿರ್ದಾಕ್ಷಿಣ್ಯವಾಗಿ ಬಾಡಿಗೆ ವಸೂಲು ಮಾಡುತ್ತಿದ್ದ.

ಹೀಗೆ ಒಂದು ಸಾರಿ ಬಾಡಿಗೆದಾರರಿಂದ ಬಾಡಿಗೆ ವಸೂಲಿ ಮಾಡಿಕೊಂಡು ಆ ನೋಟುಗಳೆಲ್ಲವನ್ನೂ ಪಟ್ಟಿಯ ಸಹಿತ ತನ್ನ ಪರ್ಸಿನಲ್ಲಿ ಭದ್ರಪಡಿಸಿಕೊಂಡು, ಸರಿಯಾಗಿ ಮಟಮಟ ಮಧ್ಯಾಹ್ನ ಎಗ್ಮೊರಿನಲ್ಲಿ ಎಲೆಕ್ಟ್ರಿಕ್ ರೈಲು ಹತ್ತಿ ಮಾಂಬಲಂ ಸ್ಟೇಷನ

ಪಿ. ವಿ. ರಾಮಚಂದ್ರಮೂರ್ತಿ, ಮದರಾಸು.



ನಲ್ಲಿ ಇಳಿದ. ಇಳಿದಮೇಲೆ ಟಿಕೀಟಿಗಾಗಿ ಕಿಸೆಯಲ್ಲಿ ಕೈ ಹಾಕಿದ. ಕೈಗೆ ಟಿಕೀಟು ಮಾತ್ರ ಸಿಕ್ಕಿತು. ಪರ್ಸ್ ಕಾಣಲಿಲ್ಲ.

ಸೇತೂರಾಮಯ್ಯನ ಕಾಲು ಕುಸಿಯಿತು. 'ಅಯ್ಯಯ್ಯೋ ಹೋಯಿತು. ಸರ್ವನಾಶವಾಯಿತು' ಅಂತ ಬಾಯಿ ಬಡಕೊಂಡ. ಎಲ್ಲರೂ ಸುತ್ತಲೂ ಸೇರಿದರು. ಯಾರೇನು ಮಾಡ ಬಲ್ಲರು? "ಪಾಪ, ಹಣ ಕಳಕೊಂಡನಂತೆ" ಎಂದು ಸಹಾನುಭೂತಿ ತೋರಿಸಿ, ಅವರವರ ದಾರಿ ಅವರು ಹಿಡಿದರು. ಆಗದವರು ಕೆಲವರು 'ಮತ್ತೆ ಅನ್ಯಾಯವಾಗಿ ಕಿತ್ತುಕೊಂಡ ಹಣನಿಲ್ಲುವುದೇ? ಹಾಗೇ ಆಗಬೇಕು ಶಾಸ್ತಿ' ಎಂದು ಆತನೆದುರಾಗಿಯೇ ಹೇಳಿ ತಮ್ಮ ಹೊಟ್ಟೆಉರಿ ತೀರಿಸಿಕೊಂಡರು.

ಎಗ್ಮೊರ್ ಸ್ಟೇಷನಲ್ಲಿ ಸೇತೂರಾಮಯ್ಯ ಹತ್ತಿದ್ದ ಡಬ್ಬಿಯಲ್ಲೇ, ಪರ್ಸ್ ಹೋಗುವ ಸಮಯಕ್ಕೆ ಜೋಬುಕಳ್ಳ ಕುಟ್ಟಿಕಣ್ಣ ಇದ್ದ. ಕುಟ್ಟಿಕಣ್ಣ ತನ್ನ ಪಕ್ಕದಲ್ಲೇ ಇದ್ದು ಕಿಸೆ ಕಡೆ ಕೈಹಾಕುತ್ತಿದ್ದ ವಿಷಯ ಸೇತೂರಾಮಯ್ಯನಿಗೆ ತಿಳಿಯಲೇ ಇಲ್ಲ. ಯಾವಾಗ ಹೇಗೆ ಹಾರಿಸಿ ಬಿಟ್ಟನೋ, ಸೇತೂರಾಯ್ಯನ ಪರ್ಸ್‌ನೊಂದಿಗೆ ಕುಟ್ಟಿಕಣ್ಣ ಸೈದಾಪೇಟೆ ಸ್ಟೇಷನಲ್ಲಿ ಇಳಿದು, ಗೆದ್ದೆನೆಂದು ಎಲ್ಲೋ ಮಾಯವಾದ.

ಕುಟ್ಟಿಕಣ್ಣ ಕೂಡಲೇ ತನ್ನ ಮನೆಗೆ ನೆಟ್ಟಗೆ ಹೊರಟು ಬಿಟ್ಟಿದ್ದರೆಚೆನ್ನಾಗಿರುತ್ತಿತ್ತು. ಆದರೆ ಹಿಂದೆ ಮುಂದೆ ನೋಡುತ್ತಾ ಯಾರೂ ಇಲ್ಲದಿದ್ದ ಸ್ಥಳದಲ್ಲಿನಿಂತ. ಆತುರ ತಡೆಯಲಾರದೆ ಒಂದು ಸಾರಿ ಆಕಡೆ ಈಕಡೆನೋಡಿ ಪರ್ಸ್ ತೆಗೆದು ರೂಪಾಯಿ ನೋಟುಗಳನ್ನು ಲೆಕ್ಕ ಮಾಡಲು ಪ್ರಾರಂಭಿಸಿದ. ಅವೆಲ್ಲವೂ ಹತ್ತು, ನೂರು ರೂಪಾಯಿನ ದೊಡ್ಡ ನೋಟುಗಳಾಗಿದ್ದುದರಿಂದ ಅತನ ಸಂತೋಷಕ್ಕೆ ಪಾರವಿಲ್ಲ, ಆ ಸಂತೋಷ ಭರದಲ್ಲಿ ಸಿಳ್ಳುಹಾಕಿ ರಾಗಹಾಡುತ್ತಾ, "ಲಾಭ, ಹತ್ತು, ಇಪ್ಪತ್ತು, ನಲವತ್ತು...." ಎಂದು ಪ್ರಾರಂಭಿಸಿ 'ಮುನ್ನೂರ ಎಂಭತ್ತ ಮೂರು' ಎಂದು ಲೆಕ್ಕ ಮಾಡಿ ಮುಗಿಸುವ ವೇಳೆಗೆ "ಯಾರು, ಕುಟ್ಟಿಕಣ್ಣ?" ಎಂದ ಮಾತುಗಳು ಕೇಳಿಸಿದವು. ಅವನು ಬೆಚ್ಚಿಬಿದ್ದು ಹಿಂದಕ್ಕೆ ತಿರುಗಿ ನೋಡಲು ಪೋಲೀಸು ಇನ್ಸ್‌ಪೆಕ್ಟರ್

ದೂರೆರಾಜ್ ಪ್ರತ್ಯಕ್ಷನಾದ. ಇನ್ಸ್ಪೇಕ್ಟರ ರನ್ನು ನೋಡಿದ ಕೂಡಲೇ ಕುಟ್ಟಿಕಣ್ಣನ ಆನಂದ ಅಡಗಿ ಎಲ್ಲೋ ಮಾಯವಾಯಿತು.

ದೊರೆರಾಜ ಆ ಪರ್ಸು ಮತ್ತು ರೂಪಾಯಿ ಗಳ ನೋಟುಗಳನ್ನು ನೋಡಿದ. "ಏನು ಕುಟ್ಟಿಕಣ್ಣ, ಒಂದು ಸಾರಿ ಜೈಲು ರುಚಿ ನೋಡಿಯೂ ಸಹ ಕಳ್ಳತನ ಬಿಡಲಿಲ್ಲವೇ?" ಎಂದ. ನೋಟುಗಳೊಂದಿಗೆ ಇಪ್ಪತ್ತೊಂಬತ್ತು ಜನರ ಹೆಸರಿರುವ ಸೇತೂರಾಮಯ್ಯನ ಪಟ್ಟಿ ಕಾಣಿಸಿತು. "ಆ ಪಟ್ಟಿ ಏನು, ಕುಟ್ಟಿಕಣ್ಣ?' ಎಂದ ದೊರೆರಾಜ್. ಅದರ ವಿಷಯ ಕುಟ್ಟಿಕಣ್ಣನಿಗೆ ಮಾತ್ರ ಏನು ಗೊತ್ತು? ಇದ್ದಕ್ಕಿದಂತೆಯೇ ಕುಟ್ಟಿಕಣ್ಣನಿಗೆ ಒಂದು ಉಪಾಯ ಹೊಳೆಯಿತು.

"ಇನ್ಸ್ಪೇಕ್ಟರೇ, ಈ ಪಟ್ಟಿಯಲ್ಲಿರುವವರೆಲ್ಲಾ ನನ್ನ ಸ್ನೇಹಿತರು. ನೀವೇನು ಅಂದುಕೊಂಡಿದ್ದೀರೋ, ಈಗ ನಾನು ಹಿಂದಿನಂತೆ ಅಲ್ಲ. ಸೆರೆಮನೆಯಿಂದ ಬಿಡುಗಡೆ ಆದಲಾಗಾಯ್ತು ಬುದ್ಧಿ ತಂದುಕೊಂಡು ತುಂಟರ ಸಹವಾಸ ತ್ಯಜಿಸಿ, ಒಳ್ಳೆಯವರ ಸಹವಾಸ ಮಾಡುತ್ತಿದ್ದೇನೆ" ಎಂದು ಬುರುಡೆ ಹೊಡೆದ.

"ಸರಿ, ಈ ಪರ್ಸ್, ರೂಪಾಯಿ ಎಲ್ಲಿಯವು?" ಎಂದು ಕೇಳಿದ ದೊರೆರಾಜ್. "ಎಲ್ಲಿಯದೇನು ಬಂತುಸಾರ್! ಬೆವರು ಸುರಿಸಿ ಸಂಪಾದಿಸಿದೆ ಸಾರ್. ಹಿಂದೆ ಯಾರ ಯಾರದೋ ಪರ್ಸ್‌ಗಳನ್ನು ಲಪಟಾಯಿಸಿ ಪಾಪ ಸಂಪಾದಿಸಿದೆನಲ್ಲವೇ? ಆ



ಹಳೆ ಪಾಪವನ್ನು ತೊಡೆದು ಹಾಕಿಕೊಳ್ಳಬೇಕೆನ್ನಿಸಿತು. 'ಏನು ಮಾಡಿದರೆ ಸರಿಯಾಗಿರುತ್ತದೆ' ಎಂದು ಆಲೋಚಿಸಿದೆ. ನನ್ನನ್ನು ಸನ್ಮಾರ್ಗಕ್ಕೆ ತಂದ ಈ ದೊಡ್ಡಮನುಷ್ಯರಿಗೆಲ್ಲಾ ಒಂದು ಸುದಿನ ನೋಡಿ ಸ್ವಲ್ಪ ಸ್ವಲ್ಪ ಹಣವನ್ನು ಮನಿಯಾರ್ಡರ್ ಮೂಲಕ ಮಾಡೋಣವೆಂದು ಹಣ ಸೇರಿಸಿಟ್ಟೆ. ಇಂದು ನನ್ನ ಹುಟ್ಟಿದ ಹಬ್ಬ. ಇದಕ್ಕಿಂತಲೂ ಸುದಿನ ಯಾವುದು.? ಯಾರಿಗೆ ಎಷ್ಟು ಎಷ್ಟು ಹಣ ಪಾವತಿ ಮಾಡಬೇಕೆಂಬುದನ್ನು ಈ ಪಟ್ಟಿಯಲ್ಲಿ ಬರೆದಿಟ್ಟುಕೊಂಡು, ಅದೇ ಪ್ರಕಾರ ಮನಿಯಾರ್ಡರು ಮಾಡೋಣವೆಂದು ಪಟ್ಟಿ, ಹಣ ತಂದಿದ್ದೇನೆ" ಎಂದ ಕುಟ್ಟಿಕಣ್ಣ.

ಇದೆಲ್ಲಾ ಕುಟ್ಟಿಕಣ್ಣ ಕಲ್ಪಿಸಿದ ಕತೆ ಯೆಂದು ಇನ್ಸ್‌ಪೆಕ್ಟರನಿಗೂ ಗೊತ್ತು. ಆತ ನನ್ನು ಅಷ್ಟಕ್ಕೆ ಬಿಡದೆ "ಸರಿ ಸರಿ, ನಡಿ ಪೋಸ್ಟಾಫೀಸಿಗೆ" ಎಂದ

ಅದನ್ನು ಕೇಳಿ ಕುಟ್ಟಿಕಣ್ಣನ ಮುಖ ಬಿಳು ಪೇರಿತು. ಮರುಮಾತನಾಡದೆ ಎದ್ದು ಇನ್ಸ್‌ಪೆಕ್ಟರನ ಸಂಗಡ ಪೋಸ್ಟಾಫೀಸಿಗೆ ಹೋಗಿ, ಮುಖ ಮೋರೆ ಅರಿಯದ ಆ ಇಪ್ಪತ್ತೊಂಬತ್ತು ಜನಕ್ಕೂ ಪಟ್ಟಿಯಲ್ಲಿರುವ ಪ್ರಕಾರ ಹಣವೆಲ್ಲಾ ಮನಿಯಾರ್ಡರ್ ಮಾಡಿಬಿಟ್ಟ. ಅಷ್ಟಕ್ಕೆ ಮುಗಿಯಿತೇ ? ಪೋಸ್ಟಾಫೀಸಿನಲ್ಲಿ ಗುಮಾಸ್ತನು ಮನಿಯಾರ್ಡರು ಫಾರಂಗಳೊಂದಿಗೆ ಹಣ ಸರಿನೋಡಿಕೊಂಡು 'ಮನಿಯಾರ್ಡರು ಕಮಿಷನ್ ಎಲ್ಲಿ?' ಎಂದ.... ಈ ಅವಾಂತರದಲ್ಲಿ ಕಮಿಷನ್ ವಿಷಯ ಮರೆತೇ ಬಿಟ್ಟಿದ್ದ ಕುಟ್ಟಿಕಣ್ಣ. ಅದರ ವಿಷಯ ಜ್ಞಾಪಕ ವಿದ್ದಿದ್ದರೆ ಕಮಿಷನ್ ಕಳೆದು ಹಣ ಕಳುಹಿಸುತ್ತಿದ್ದ. ಈಗ ಏನು ಅಂದುಕೊಂಡರೆ ಏನು ಲಾಭ? ಸ್ವಂತ ಹಣದಿಂದ ನಾಲ್ಕು ರೂಪಾಯಿ ಚಿಲ್ಲರೆ ತೆಗೆದು ಕೊಟ್ಟ.

ಸೇತೂರಾಮಯ್ಯನ ಮನೆಗಳಲ್ಲಿ ಬಾಡಿಗೆಗೆ ಇರುವ ಆ ಇಪ್ಪತ್ತೊಂಬತ್ತು ಜನಕ್ಕೂ ಮನಿಯಾರ್ಡರ್ ಮರುದಿನವೇ ಬಂತು. ಆ ಕುಟ್ಟಿಕಣ್ಣನು ಯಾರೋ, ಅವನು ತಮಗೆ ಸರಿಯಾಗಿ ಒಂದು ತಿಂಗಳ ಬಾಡಿಗೆ ಸರಿ ಹೋಗುವಷ್ಟೇ ಹಣ ಏಕೆ ಮನಿಯಾರ್ಡರು ಮಾಡಿರುವನೋ ಯಾರಿಗೂ ತಿಳಿಯಲಿಲ್ಲ.

ತರುವಾಯ ಸೇತೂರಾಮಯ್ಯನು ಅವರೊಂದಿಗೆಲ್ಲಾ ಪರ್ಸ್ ಹೋದ ಸಮಾಚಾರ ಹೇಳಲು, ಕೆಲಜನ ಬುದ್ಧಿವಂತರು, ಸೇತೂರಾಮಯ್ಯನ ಮೇಲಿರುವ ಕೋಪದಿಂದ, ಯಾರೋ ಆತನ ಪರ್ಸ್ ಲಪಟಾಯಿಸಿರಬೇಕೆಂದೂ, ಪಟ್ಟಿ ಪ್ರಕಾರ ಸಹೋದರ ಭಾವದಿಂದ ಮಿಕ್ಕ ಹಣವನ್ನು ತಮಗೆ ಮನಿಯಾರ್ಡರು ಮಾಡಿರಬೇಕೆಂದೂ ಊಹಿಸಿಕೊಂಡು ಸುಮ್ಮನಿದ್ದರು.

ಕುಟ್ಟಿಕಣ್ಣ ತನ್ನ ಹುಟ್ಟಿದ ಹಬ್ಬ ಈರೀತಿ ಆಚರಿಸಿದ. ಕೈಗೆ ಸಿಕ್ಕಿದ ಹಣ ಹಾರಿ ಹೋದುದೇ ಅಲ್ಲದೆ, ಆತನ ಸ್ವಂತ ಹಣವಾಗಿದ್ದ ನಾಲ್ಕು ರೂಪಾಯಿ ಕೂಡ ಕೈಬಿಟ್ಟಿತು.






7

[ಮಾರುದ್ದ ಗಡ್ಡದ, ಗೇಣುದ್ದ ಮನುಷ್ಯನ ಮಾಯೆಯಲ್ಲಿ ಉದಯನ, ನಿಶೀಥ, ಸಂಧ್ಯಾ ಕುಮಾರರು ಹೇಗೆ ಸಿಲುಕಿಕೊಂಡರು, ಆ ತರುವಾಯ ದೈವಕೃಪೆಯಿಂದ ಮಾಯಾವಿಯ ತಂತ್ರವನ್ನು ಉದಯನ ಹೇಗೆ ಕಂಡುಹಿಡಿದನೆಂಬುದು ತಿಳಿದಿರಿ. ಮುಂದೆ ಓದಿರಿ.]

**ಮಾ**ಮೂಲಿನಂತೆ ಸಂಧ್ಯಾ, ನಿಶೀಥರಿಗೆ ಹಗಲು ಹೊತ್ತೇ ಕಾಣಿಸುವುದಿಲ್ಲ. ಅದರೊಂದಿಗೆ ಈಗ ಗಡ್ಡದ ಆಸಾಮಿ ಬೇರೆ ಮಾಯ ಮಾಡಿದ್ದಾನೆ. ಆ ಮಾಯೆಯಿಂದ ಉದಯನನು ಗೇಣುದ್ದಮನುಷ್ಯನಾದುದೂ, ಮಂಚದ ಮೇಲೆ ಮಲಗಿರುವ ಗಡ್ಡದಾತನು ಸಾಮಾನ್ಯ ಮನುಷ್ಯನಾದುದೂ ಅವರು ತಿಳಿಯಲಾರದೆ ಹೋದರು. ಗಡ್ಡದಾತನು ಯಾವ ಕ್ಷಣ ಏಳುವನೋ, ಎದ್ದು ಮತ್ತೇನು ಉಪದ್ರವ ಕೊಡುವನೋ ಎಂದು ಅವರು ಚಿಂತೆ ಪಡುತ್ತಿದ್ದರು.

ಗಡ್ಡದವನ ತಂತ್ರ ತನಗೆ ತಿಳಿದುದು ಮಾತ್ರವೇ ಅಲ್ಲದೆ, ಅವನನ್ನು ಮೋಸಮಾಡಿ, ತಾನೂ ಸಹ ಅವನಂತೆ ರೂಪ ಬದಲಾಯಿಸಿದೆನಲ್ಲಾ ಎಂದು ಉದಯನನು ಸಂತೋಷಪಟ್ಟನು. ಈ ಸಂತೋಷದಲ್ಲಿ ಉದಯನ ತನ್ನ ಸಹೋದರರ ವಿಷಯವೇ ಮರೆತುಬಿಟ್ಟಿದ್ದನು. ಈಗ ಉದಯನನ ದೃಷ್ಟಿಯೆಲ್ಲಾ ತನ್ನ ಕಿಸೆಗಳಲ್ಲಿರುವ ಭಸ್ಮಗಳ ಮೇಲೇ ಇತ್ತು. ಈ ಭಸ್ಮಗಳೂ, ಅಂಜನಗಳೂ ಏತಕ್ಕೆ ಉಪಯೋಗವಾಗುವುವು ಎಂದು ಆಲೋಚಿಸುತ್ತಿರುವಾಗ, ಇದ್ದಕ್ಕಿದ್ದಂತೆ ಸಹೋದರರ ವಿಷಯ ಜ್ಞಾಪಕಕ್ಕೆ ಬಂತು. ಸುತ್ತಲೂ ನೋಡಿದನು. ಆದರೆ ಅವರೆಲ್ಲಿ? ಉದಯನನಿಗೆ ಬುದ್ಧಿ ಓಡಲಿಲ್ಲ. ಏನು ಮಾಡಲೂ ತೋಚದೆ ಹೀಗಿಂದಹಾಗೆ ಅಡ್ಡಾಡುತ್ತಿದ್ದನು. ಈ ಸಪ್ಪುಳ ಕೇಳಿ ಎಚ್ಚರಗೊಂಡು ಗಡ್ಡದ ಆಸಾಮಿ ಎದ್ದನು. ತನ್ನ ಎದುರಾಗಿ ತದ್ರೂಪು



ಪಡೆದಿರುವ ಮೊಂಡು ಕೈಯಿನ ಉದಯನನನು ಕಾಣಿಸಲು, ಗಡ್ಡದವನಿಗೆ ವಿಷಯವೆಲ್ಲಾ ತಿಳಿದುಹೋಯಿತು. ತನ್ನ ಗುಟ್ಟು ರಟ್ಟಾಯಿತಲ್ಲಾ ಎಂದು ಮನಸ್ಸಿನಲ್ಲಿ ಖೇದಗೊಂಡರೂ ಹೊರಗೆ ಸ್ವಲ್ಪವಾದರೂ ಸಿಟ್ಟನ್ನು ತೋರಗೊಡಲಿಲ್ಲ.

ಅವನು ಮೆಲ್ಲನೆ ಉದಯನನ ಕಡೆ ನಡೆದು ಬಂದು "ನೀವು ಯಾರೋ ಅಸಾಧ್ಯರಿರುವಂತೆ ಕಾಣುತ್ತದೆ. ಇಷ್ಟು ದಿನಗಳಾದ ಮೇಲೆ ನನ್ನ ರಹಸ್ಯವನ್ನು ಕಂಡುಹಿಡಿಯಬಲ್ಲ ಸಮರ್ಥರನ್ನು ನೋಡುತ್ತಿರುವುದು ನನ್ನ ಅದೃಷ್ಟವೆಂದು ಭಾವಿಸುವೆನು. ಆದರೆ ನಿಮಗೆ ಇದರಿಂದ ಆಗುವ ಲಾಭವಾದರೂ ಏನು? ನೀವು ಇಲ್ಲಿಗೆ ಬಂದ ಕೆಲಸವೇನೋ ಹೇಳಿದರೆ ಒಂದು ನಿಮಿಷ ಮಾತ್ರದಲ್ಲಿ ನೆರವೇರಿಸಿಕೊಡುವೆನು. ನಾನಿರುವಾಗ ನೀವು ತೊಂದರೆ ಪಡುವುದಾದರೂ ಏಕೆ?" ಎಂದು ಉದಯನನ ಕತ್ತಿನಲ್ಲಿದ್ದ ಹಾರಕ್ಕಾಗಿ ಅನೇಕ ವಿಧವಾಗಿ ಪ್ರಾರ್ಥಿಸಿದನು.

ಇಷ್ಟು ಸುಲಭವಾಗಿ ಮೋಸ ಹೋಗುವನೇ, ಉದಯನ? "ಮುಂಚೆ ನನ್ನ ಸಹೋದರರನ್ನು ಎಲ್ಲಿ ಬಚ್ಚಿಟ್ಟಿರುವೆಯೋ ಹೇಳು, ಆಮೇಲೆ ಮಿಕ್ಕ ಸಮಾಚಾರ ಯೋಚಿಸುವಾ" ಎಂದನು.

"ಎಲ್ಲೂ ಬಚ್ಚಿಟ್ಟಿಲ್ಲ. ಇಲ್ಲೇ ಇದ್ದಾರೆ. ಅದೋ, ನಿನ್ನ ಷರಟಿನ ಎಡಗಡೆ ಜೋಬಿನಲ್ಲಿರುವ ಡಬ್ಬಿಯಲ್ಲಿ ಕಪ್ಪು ಭಸ್ಮವಿದೆ. ಅದನ್ನು ಅಲ್ಲಿ ಎರಚು" ಎಂದು ಅವರನ್ನು ಮಾಯ ಮಾಡಿದಕಡೆ ಬೆರಳು ತೋರಿಸಿದನು. ಉದಯನ ಅವನು ಹೇಳಿದಂತೆ ಕಪ್ಪು ಭಸ್ಮ ಎರಚಲು, ಒಂದೇ ಸಾರಿ ನಿಶೀಥ, ಸಂಧ್ಯರು ಕಾಣಿಸಿಕೊಂಡರು.

ತರುವಾಯ ಉದಯನನು "ಸರಿ ನನ್ನ ಮೊಂಡು ತೋಳು ಮೊದಲಿನಂತಾಗುವ ರೀತಿ ಹೇಳು" ಎಂದು ಗಡ್ಡದವನನ್ನು ಕೇಳಿದನು.

"ಇದಕ್ಕೆ ಔಷಧ ನಿನ್ನ ಹತ್ತಿರಲೇ ಇದೆ. ನೋಡು, ನಿನ್ನ ಬಲ ಕಿಸೆಯಲ್ಲಿ ಹಸರು ಬಣ್ಣದ ಅಂಜನದ ಡಬ್ಬಿಯಿದೆ. ಅದನ್ನು ತೆಗೆದು ಮೊಂಡು ಕೈಗೆ ಹಚ್ಚು" ಎಂದ ಗಡ್ಡದವ. ಉದಯನ ಅದೇರೀತಿ ಮಾಡಲು ಯಥಾಪ್ರಕಾರ ಅವನ ಕೈ ಬಂತು.




ಈಗ ಉದಯನನಿಗೆ ತನ್ನ ಕಿಸೆಯಲ್ಲಿರುವ ಬಿಳಿ ಭಸ್ಮ, ಕೆಂಪು ಅಂಜನಗಳು ಯಾವುದಕ್ಕೆ ಉಪಯೋಗವಾಗುವುವೋ ತಿಳಿದುಕೊಳ್ಳ ಬೇಕೆಂಬ ಆಸಕ್ತಿ ಉಂಟಾಯಿತು. ಗಡ್ಡದವನಿಗೆ ಅವುಗಳನ್ನು ತೋರಿಸುತ್ತಾ "ಇವು ಏತಕ್ಕೆ ಉಪಯೋಗವಾಗುವುದು" ಎಂದನು. ಗಡ್ಡದವನು ನಗುತ್ತಾ "ಇಷ್ಟು ಮಾತ್ರ ಗ್ರಹಿಸಲಾರೆಯಾ? ನಿನ್ನ ಸಹೋದರರನ್ನು ಮಾಯ ಮಾಡಿದ್ದು ಆ ಬಿಳಿ ಭಸ್ಮದಿಂದ; ನಿನ್ನ ಕೈ ಮೊಂಡು ಮಾಡಿದ್ದು ಆ ಕೆಂಪು ಅಂಜನದಿಂದ" ಎಂದು ಗುಟ್ಟನ್ನು ಬಯಲು ಮಾಡಿದನು.

"ಮತ್ತೆ ಹಾಗಾದರೆ ಈ ವಸ್ತ್ರ ಏಕೆ?" ಎಂದ ಉದಯನ.

"ಇದರಿಂದ ಎರಡು ಉಪಯೋಗಗಳಿವೆ. ನಿಮಗೆ ಬೇಕಾದ ಆಹಾರ ಯಾವುದಾದರೂ ಸರಿ ಮನಸ್ಸಿನಲ್ಲಿ ನೆನೆದು, ಈ ಚೌಕ ಹಾಸಿದರೆ, ಅದು ಕೂಡಲೇ ಸಿದ್ಧವಾಗುತ್ತದೆ. ಯಾವುದೇ ವಿಧವಾದ ವ್ಯಾಧಿಯನ್ನಾದರೂ ಇದು ಗುಣಪಡಿಸಬಲ್ಲದು" ಎಂದ ಗಡ್ಡದವ.

"ಹಾಗಾದರೆ ನಮ್ಮ ದೃಷ್ಟಿಶಕ್ತಿಯಲ್ಲಿನ ಭೇದಗಳು ಬದಲಾವಣೆಯಾಗುವಂತೆ ಮಾಡಬಲ್ಲದೇ ಈ ವಸ್ತ್ರ?" ಎಂದ ಉದಯನ.

"ದೃಷ್ಟಿಭೇದವೇ? ಏನದು" ಎಂದು ಗಡ್ಡದವ ಆಶ್ಚರ್ಯಚಕಿತನಾಗಿ ಕೇಳಲು, ಉದಯನ ತನಗೆ ಕತ್ತಲೆಯಲ್ಲಿ ಕಣ್ಣು ಕಾಣಿಸದಿರುವುದೂ, ಹಾಗೇ ತನ್ನ ಸಹೋದರರು ಅವರಿಗೆ ಅನುಕೂಲವಾಗದ ಸಮಯಗಳಲ್ಲಿ ಕುರುಡರಂತೆ ಆಗುವುದೂ ವಿವರಿಸಿ ಹೇಳಿದನು.

ಅದೆಲ್ಲವನ್ನೂ ಕೇಳಿದ ತರುವಾಯ ಗಡ್ಡದವನು "ಹಾಗೋ ನಿಮ್ಮ ವಿಷಯ! ನಿಮ್ಮ ಮೂವರಿಗೂ ಮಾಮೂಲು ದೃಷ್ಟಿ ಶಕ್ತಿ ಬರುವ ಮಾರ್ಗ ಹೇಳುತ್ತೇನೆ. ಮೊದಲು ನನ್ನ ಹಾರ ಕೊಟ್ಟುಬಿಡು" ಎಂದನು.

ಆದರೆ ಉದಯನನಿಗೆ ಗೊತ್ತು. ಸ್ವಲ್ಪ ಅಜಾಗರೂಕತೆಯಿಂದ ಇದ್ದರೆ ಈ ಗಡ್ಡದವ ತಮ್ಮನ್ನು ಜೀವಸಹಿತ ಬಿಡುವುದಿಲ್ಲವೆಂದು. ಆದುದರಿಂದ ಉಪಾಯವಾಗಿ ಹೀಗೆ ಹೇಳಿದನು. "ತಾತಾ, ನಮಗೆ ದೃಷ್ಟಿಶಕ್ತಿ ಬರುವ ಮಾರ್ಗ ಹೇಳು. ಇದೊಂದೇ ನಮಗೆ ಉಳಿದಿರುವ ಕೋರಿಕೆ. ಇಲ್ಲಿಗೆ ಪಶ್ಚಿಮಕ್ಕೆ ಹತ್ತು



ಮೈಲು ದೂರದಲ್ಲೊಂದು ಗುಹೆಯಿದೆ. ನಿನ್ನ ಈ ಹಾರವನ್ನು ಆ ಗುಹೆಯಲ್ಲಿಟ್ಟು ನಾವು ಹೊರಟು ಹೋಗುತ್ತೇವೆ. ನೀನು ಹೋಗಿ ಅದನ್ನು ಪಡೆಯಬಹುದು" ಎಂದನು.

ಆ ಹಾರ ಆತನಿಗೆ ಜೀವಾಳವಾದುದರಿಂದ, ಗಡ್ಡದವ ಈ ಏರ್ಪಾಟಿಗೆ ಒಪ್ಪಿಕೊಳ್ಳದೆ ಗತ್ಯಂತರವಿಲ್ಲ.

ಇಷ್ಟರಲ್ಲಿ ನಿಶೀಥ, ಸಂಧ್ಯರೆದ್ದುಬಂದು "ಅಣ್ಣಾ ಇವನ ಕೈಗೆ ಸಿಲುಕಿ, ನಾವು ಇದುವರೆವಿಗೂ ಹೊಟ್ಟೆ ಹಸಿವಿನಿಂದ ಸಾಯುತ್ತಿದ್ದೇವೆ. ಎಲ್ಲಿ, ಆ ವಸ್ತ್ರದ ಮಹಿಮೆ ಎಷ್ಟು ಮಾತ್ರ ನಿಜವೋ ನೋಡಿಯೇಬಿಡೋಣ" ಎಂದರು.

ಉದಯನನಿಗೆ ಈ ವಿಷಯ ಹೊಳೆದೇ ಇರಲಿಲ್ಲ. ತನ್ನ ಸಹೋದರರು ಸೂಚಿಸಿದ ಕೂಡಲೇ ಉದಯನನು ಬಗೆ ಬಗೆಯ ಫಲಗಳನ್ನು ನೆನೆಸಿ, ಚೌಕವನ್ನು ಹಂಡಿದನು. ಮರುಕ್ಷಣವೇ ವಿವಿಧ ಹಣ್ಣುಗಳು ಚೌಕದ ಮೇಲೆ ಕಾಣಿಸಿ, ಕಣ್ಣುಗಳಿಗೆ ಹಬ್ಬವನ್ನುಂಟು ಮಾಡಿತು. ಉದಯನ ಕೆಲ ಹಣ್ಣುಗಳನ್ನು ತನ್ನ ಸಹೋದರರಿಗೆ ಕೊಟ್ಟು, ಕೆಲವು ತಾನು ತಿಂದನು. ಅದರೊಂದು ವಿಚಿತ್ರ, ಎಷ್ಟು ತಿಂದರೂ ಚೌಕದ ಮೇಲಿರುವ ಹಣ್ಣುಗಳು ಮುಗಿಯಲೇ ವೊಲ್ಲವು. ಆದ್ದರಿಂದ, ಗಡ್ಡದವನು ದುಷ್ಟನಾದರೂ ಅವನಿಗೂ ಸಹ ಕೆಲವು ಹಣ್ಣುಗಳನ್ನು ಕೊಟ್ಟನು.

ಹೊಟ್ಟೆ ತುಂಬಿದ ತರುವಾಯ ಉದಯನನು ಚೌಕವನ್ನು ಮಡಿಚಿ ಕಿಸೆಯೊಳಗೆ ಸೇರಿಸಿದನು. "ಮತ್ತೆ ನಮಗೆ ದೃಷ್ಟಿ ಲಭಿಸುವ ಮಾರ್ಗ ಹೇಳು. ದೃಷ್ಟಿಶಕ್ತಿ ಲಭಿಸಿದರೆ ನಮ್ಮ ಹಾದಿ ಹಿಡಿದು ನಾವು ಹೋಗುತ್ತೇವೆ" ಎಂದನು.

ಅದಕ್ಕೆ ಗಡ್ಡದವನು "ನಿನ್ನ ಹತ್ತಿರವಿರುವ ಕೆಂಪು ಅಂಜನವನ್ನು ಉಂಡೆಯಾಗಿ ಮಾಡು. ಆ ಉಂಡೆಯನ್ನು ಈ ನಾರಿನಿಂದ ಸುತ್ತಿ ಬೆಂಕಿ ಹತ್ತಿಸು. ಅದರಿಂದ ಬ್ರಹ್ಮಾಂಡವಾದ ಹೊಗೆ ಬರುತ್ತದೆ. ನೀವು ಮೂವರೂ ಈ ಚೌಕವನ್ನು ತಲೆಯಮೇಲೆ ಹೊದೆದುಕೊಂಡು, ಆ ಧೂಪ ನಿಮ್ಮ ಕಣ್ಣುಗಳಿಗೆ ತಗಲುವಂತೆ ನೋಡಿ. ಒಂದೈದು ನಿಮಿಷ ಹಾಗೇ ಇದ್ದರೆ ನಿಮಗೆ ಮಾಮೂಲಿನಂತೆ ದೃಷ್ಟಿಶಕ್ತಿ ಬರುತ್ತದೆ" ಎಂದನು.

ಅದೇ ರೀತಿ ಉದಯನ ಕೆಂಪು ಅಂಜನವನ್ನು ಒಂದು ಉಂಡೆಯನ್ನಾಗಿ ಮಾಡಿ, ನಾರಿನಿಂದ ಸುತ್ತಿದನು. ಆದರೆ ಬೆಂಕಿ ಎಲ್ಲಿಂದ ತರುತ್ತಾನೆ. ಉದಯನ ಏನು ಮಾಡಲಿ ಎಂದು ಯೋಚಿಸುತ್ತಿರುವಾಗ, ಗಡ್ಡದ ಆಸಾಮಿ ಎರಡು ಚಕಮುಕಿ ಕಲ್ಲುಗಳನ್ನು ತಂದು, ಬೆಂಕಿ ಮಾಡಿ ಅದನ್ನು ಹತ್ತಿಸಿದನು. ನಾರಿನೊಳಗಿದ್ದ ಆ ಉಂಡೆ ಹತ್ತಿಕೊಂಡ ಕೂಡಲೇ ಬ್ರಹ್ಮಾಂಡವಾದ ಹೊಗೆ ಎದ್ದಿತು.

ಉದಯನ, ಆತನ ಸಹೋದರರು ಮೂವರೂ ಹೊಗೆಯಲ್ಲಿ ಕುಳಿತುಕೊಂಡು, ತಲೆಯಮೇಲೆ ಆ ಚೌಕವನ್ನು ಹೊದೆದುಕೊಂಡರು.

ಐದು ನಿಮಿಷಗಳಾದ ತರುವಾಯ ಮೂವರೂ ಹೊರಗೆ ಬಂದರು. ಮೂವರ ಕಣ್ಣುಗಳಲ್ಲೂ ನೀರು ಧಾರಕಾರವಾಗಿ ಸುರಿಯುತಿತ್ತು. ಕೆಲ ಹೊತ್ತಿಗೆಲ್ಲಾ ಕಣ್ಣೀರು ನಿಂತು ಹೋಯಿತು.

ಆದರೆ ಏನಪ್ಪಾ ಆಶ್ಚರ್ಯ ಅಂತೆಂದರೆ, ಸಾಮಾನ್ಯವಾಗಿ ಎಲ್ಲರಿಗೂ ಇರುವಂತಹ ದೃಷ್ಟಿಶಕ್ತಿ ಬರುವುದೆಂದು ಗಡ್ಡದವನು ಹೇಳಿದನಲ್ಲವೆ, ಆದರೆ ಈಗ ದೃಷ್ಟಿ ಬರುವುದು ಒತ್ತೊಟ್ಟಿಗಿರಲಿ, ಇದ್ದ ಕಣ್ಣು ಗುಡ್ಡೆಗಳೇ ಮಾಯವಾದವು.

ಉದಯನ ಉಗ್ರನಾಗಿ "ಎಲೈ ಧೂರ್ತ ಇದೇಯೋ ನೀನು ನಮಗೆ ದೃಷ್ಟಿಶಕ್ತಿ ಬರಲು





ಸಹಾಯ ಮಾಡಿದ್ದು" ಎಂದು ರೇಗಾಡಿದನು.

ಅದಕ್ಕೆ ಗಡ್ಡದವ "ತೊಂದರೆ ಬೀಳಬೇಡ. ನಿಮ್ಮನ್ನು ಮೋಸಗೊಳಿಸಬೇಕೆಂದಿದ್ದರೆ ಈ ರಹಸ್ಯಗಳನ್ನೆಲ್ಲಾ ಹೇಳುತ್ತಿದ್ದೆನೆ? ಇನ್ನೂ ಕೆಲಸ ಪೂರ್ತಿಯಾಗುವ ಮುನ್ನ ಹಾಗೇಕೆ ಕಿರುಚಾಡುವೆ? ಈಗ ಕಣ್ಣು ಗುಡ್ಡೆಗಳೂ ಸಹ ಇಲ್ಲ. ನಿನ್ನ ಹತ್ತಿರವಿರುವ ಆ ಹಸರು ಅಂಜನವನ್ನು ರೆಪ್ಪೆಗಳ ಮೇಲೆ ಹಚ್ಚಿಕೊಂಡು ನೋಡು" ಎಂದನು.

ಅದೇ ಪ್ರಕಾರ ಉದಯನನು ಆ ಅಂಜನವನ್ನು ರೆಪ್ಪೆಗಳಮೇಲೆ ಲೇಪಿಸಿಕೊಂಡನು. ಆತನಿಗೆ ಕಣ್ಣುಗಳು ಬಂತು. ಕೂಡಲೇ ತನ್ನ ಸಹೋದರರ ಕಣ್ಣುಗಳಿಗೂ ಹಚ್ಚಿದನು. ಅವರಿಗೂ ಬಂತು. ತಾನು ಗಡ್ಡದವನ ಮೇಲೆ ಅನುಚಿತವಾಗಿ ಕೋಪಿಸಿಕೊಂಡಿದಕ್ಕೆ ಉದಯನ ನಾಚಿದನು. ರಾತ್ರಿವೇಳೆಯಲ್ಲಿ ಹೊರತು ಕಣ್ಣು ಕಾಣಿಸದ ನಿಶೀಥ, ಸಂಧ್ಯಾ ಸಮಯಬಿಟ್ಟು ಮಿಕ್ಕ ವೇಳೆಯಲ್ಲಿ ಕಣ್ಣು ಕಾಣದ ಸಂಧ್ಯಾ ಕುಮಾರರು ಈಗ ಸೊಗಸಾಗಿ ನೋಡಬಲ್ಲವರಾದರು. ಅದಕ್ಕಾಗಿ ಅವರು ತುಂಬಾ ಸಂತೋಷಗೊಂಡರು.

ಆ ತರುವಾಯ ಅವರು ತಮ್ಮ ಅಶ್ವಗಳನ್ನು ತರಲು ಹೊರಟರು. ಮೊದಲು ಮೂವರೂ ಅಡವಿಗೆ ಬಂದು ಹಿಂದೆ ತಾವು ಕುದುರೆಗಳನ್ನು ಕಟ್ಟಿಹಾಕಿದ್ದ ಮರದ ಹತ್ತಿರ ಸೇರಿದರು. ಉದಯನ ತನ್ನ ಬಳಿಯಿದ್ದ ಕಪ್ಪು ಭಸ್ಮವನ್ನು ಅಲ್ಲಿ ಎರಚಲು ಯಥಾಪ್ರಕಾರ ಕುದುರೆಗಳೆರಡೂ ಕಾಣಿಸಿಕೊಂಡವು. ಅವುಗಳೊಂದಿಗೆ ಅವರು ಗುಹೆಯಲ್ಲಿ ಬಚ್ಚಿಟ್ಟ ಕಪ್ಪು ಅಶ್ವ ತರಲು ಹೋದರು. ಅದನ್ನೂ ಸಹ ಕರೆದುಕೊಂಡು ಗಡ್ಡದವನ ನಿವಾಸಕ್ಕೆ ಹಿಂತಿರುಗಿಬಂದರು.

ಆಗ ಗಡ್ಡದವನು "ನಿಮ್ಮ ಕೋರಿಕೆಗಳನ್ನೆಲ್ಲಾ ನೆರವೇರಿಸಿದೆ. ಇನ್ನು ನಿಮ್ಮ ದಾರಿ ನೀವು ಹೋಗಿ. ವಾಗ್ದಾನದಂತೆ ನನ್ನ ಹಾರವನ್ನು ಮಾತ್ರ ಆ ಗುಹೆಯಲ್ಲಿ ಬಿಟ್ಟುಹೋಗಿ ಮಾತು ತಪ್ಪಿದರೆ...." ಎಂದು ಇನ್ನೇನೋ ಹೇಳುತ್ತಿರುವಲ್ಲಿ ನಿಶೀಥನು ಅಡ್ಡ ಬಾಯಿ ಹಾಕಿ "ಇದೆಲ್ಲಾ ಸರಿ, ನೀನು ಯಾರು? ನಿನ್ನ ವಿಷಯವೇನು? ದಾರಿಯಲ್ಲಿ ಹೋಗುವ ಅಮಾಯಕರನ್ನು ಏಕೆ ಹೀಗೆ ನಿರ್ಬಂಧಿಸುವೆ?" ಎಂದು ಕೇಳಿದನು.

ಅದಕ್ಕೆ ಆ ಗಡ್ಡದವ "ಈ ವಿಷಯ ನಾನು ಹೇಳಕೂಡದು. ಅದು ತುಂಬಾ ರಹಸ್ಯವಾದುದು. ಅದನ್ನು ಬಯಲು ಮಾಡಿದೆನೆಂದರೆ ನನ್ನ ತಲೆ ಸೀಳಿ ಸಾಯುವೆನು. ಆದ್ದರಿಂದ ನನ್ನನ್ನು ಕ್ಷಮಿಸಿ" ಎಂದನು.

ಆ ಮೂವರು ಸಹೋದರರು ಅವನಲ್ಲಿ ಸಹಾನುಭೂತಿಹೊಂದಿ ಈ ರಹಸ್ಯಹೇಳಲೇಬೇಕೆಂದು ಹಠಹಿಡಿಯಲಿಲ್ಲ. ತರುವಾಯ ಅವರು ತಮ್ಮ ತಮ್ಮ ಕುದುರೆಗಳ ಮೇಲೆ ಕುಳಿತು ಹೊರಡಲು ಅನುವಾದರು. ಹೋಗುವ ಮುಂಚೆ ಉದಯನನು "ಮತ್ತೊಂದು ಕೋರಿಕೆಯಿದೆ. ನಿನ್ನ ಹಾರ ನಿನಗೆ ಕೊಡುತ್ತೇವೆ. ಆದರೆ ಭಸ್ಮ, ಅಂಜನ ಮತ್ತು ಈ ವಸ್ತ್ರ ನೀನು ನಮಗೆ ಕೊಡಬೇಕು" ಎಂದನು.

ಇದಕ್ಕೆ ಸಹ ಗಡ್ಡದವ ಒಪ್ಪಿಕೊಳ್ಳದೆ ಬೇರೆ ವಿಧಿಯಿರಲಿಲ್ಲ. ತರುವಾಯ ಬಿಳಿ ಕುದುರೆಯಮೇಲೆ ಉದಯನ, ಕರಿ ಕುದುರೆಯಮೇಲೆ ನಿಶೀಥ, ಕಂದು ಬಣ್ಣದ ಕುದುರೆಯಮೇಲೆ ಸಂಧ್ಯಾ ಕುಮಾರರು ಕುಳಿತು ಹೊರಟರು.

ಅವರು ಹೋಗುತ್ತಾ ಹೋಗುತ್ತಾ ಹಾದಿಯಲ್ಲಿ ಗಡ್ಡದವನಿಗೆ ಗುರುತುಹೇಳಿದ್ದ ಗುಹೆಯನ್ನು ಸೇರಿದರು. ಮಾತು ಕೊಟ್ಟ ಪ್ರಕಾರ ಉದಯನ ತನ್ನ ಕೊರಳಲ್ಲಿದ್ದ ಹಾರ ತೆಗೆದು ಆ ಗುಹೆಯಲ್ಲಿಟ್ಟನು. ಯಾವಾಗ ಆ ಹಾರವನ್ನು ಕೊರಳಿಂದ ತೆಗೆದುಬಿಟ್ಟನೋ



ಆಗಲೇ ಉದಯನನಿಗೆ ಮಾಮೂಲು ಸ್ವರೂಪ ಬಂತು. ಆ ತರುವಾಯ ಅವರು ಮತ್ತೆ ಕುದುರೆಗಳನ್ನು ಹತ್ತಿ ಮುಂದು ವರಿದರು. ಸ್ವಲ್ಪ ದೂರ ಹೋಗುವಲ್ಲಿ ಅವರಿಗೆ ಒಂದು ಭೀಕರ ಅರಣ್ಯ ಸಿಕ್ಕಿತು. ಆಗಾಗಲೇ ಕತ್ತಲಾಗಿಬಿಟ್ಟಿತ್ತು. ರಾತ್ರಿ ಹೊತ್ತು ಅರಣ್ಯದಲ್ಲಿ ಎಲ್ಲಿ ತಲೆಮರೆಸಿಕೊಳ್ಳುವುದು? ಏನು ಮಾಡೋಣ ಈಗ? ಎಂದು ಯೋಚಿಸುತ್ತಿರುವಲ್ಲಿ, ಮೂರು ಸಿಂಹಗಳು ಅವರಕಡೆ ಆರ್ಭಟಿಸುತ್ತಾ ಬರುತ್ತಿದ್ದವು. ನಿಶೀಥ, ಸಂಧ್ಯರಿಗೆ ಏನೂ ಬಗೆಹರಿಯದು. ಆದರೆ ಯುಕ್ತಿಪರನಾದ ಉದಯನ ತನ್ನ ಹತ್ತಿರವಿದ್ದ ಬಿಳಿ ಭಸ್ಮವನ್ನು ತೆಗೆದು ನಿಶೀಥ, ಸಂಧ್ಯರ ಮೇಲೂ, ಅವರ ಕುದುರೆಗಳ ಮೇಲೂ ಎರಚಿದನು. ಕೂಡಲೇ ಅವರು

ಮಾಯವಾದರು. ತನ್ನ ಕುದುರೆಯಮೇಲೂ, ತನ್ನ ಮೇಲೂ ಎರಚಿಕೊಂಡನು. ಆತನೂ ಸಹ ಮಾಯವಾದ.

ಅವರು ಮಾಯವಾಗುವುದಕ್ಕೂ, ಆ ಮೂರು ಸಿಂಹಗಳು ಆರ್ಭಟಿಸುತ್ತಾ ಅಲ್ಲಿಗೆ ಬಂದು ಸೇರುವುದಕ್ಕೂ ಸರಿಯಾಯಿತು. ರುಚಿಕರ ಆಹಾರ ಲಭಿಸಿತಲ್ಲಾ ಎಂದು ಬಹಳ ಆಶೆಯಿಂದ ಬಂದ ಆ ಸಿಂಹಗಳಿಗೆ ನಿರಾಶೆ ಆಯಿತು. ಸ್ವಲ್ಪ ಹೊತ್ತು ಅಲ್ಲೇ ಸುತ್ತಾಡಿ, ಅವು ಬೇರೆ ದಾರಿ ಹಿಡಿದುವು.

ಆದರೆ ಸಿಂಹಗಳು ಹೊರಟುಹೋದರೂ, ಮಾಮೂಲು ರೂಪದಲ್ಲಿ ಅಡವಿಯಲ್ಲಿ ಸಂಚರಿಸುವುದು ಅಪಾಯಕರ ವೆಂದುಕೊಂಡು, ಬೆಳಗಾಗುವವರೆವಿಗೂ ಅದೃಶ್ಯ ರೂಪದಲ್ಲೇ ಇದ್ದುಬಿಟ್ಟರು, ಅಣ್ಣ ತಮ್ಮಂದಿರು.

ಬೆಳಗಾಯಿತು. ಉದಯನ ತನ್ನ ಹತ್ತಿರ ಇದ್ದ ಬಿಳಿ ಭಸ್ಮವನ್ನು ತನ್ನಮೇಲೂ, ತನ್ನ ಅಶ್ವಗಳಮೇಲೂ ಸಹೋದರರ ಮೇಲೂ, ಅವರ ಅಶ್ವಗಳಮೇಲೂ ಎರಚಿದನು. ಮತ್ತೆ ಎಲ್ಲರೂ ಮೊದಲಿನ ಹಾಗೆ ರೂಪ ಪಡೆದರು.

ಈಗ ಅವರು ಮೂವರೂ ವಾಯುವೇಗದಿಂದ ಸವಾರಿ ಮಾಡುತ್ತಿರುವರು. ಗಡ್ಡದವನ ದಯೆಯಿಂದ ಎಲ್ಲರಿಗೂ ದೃಷ್ಟಿಶಕ್ತಿ ನೆಟ್ಟಗಾದುದರಿಂದ, ಯಾರು ಮುಂದೆ, ಯಾರು ಹಿಂದೆ ಎಂಬ ತೊಂದರೆಯಿಲ್ಲ.

ಸ್ವಲ್ಪದೂರದಲ್ಲಿ ಅವರಿಗೆ ನಿರ್ಜನವಾದ ಪ್ರದೇಶದಲ್ಲಿ ಒಂದು ದಿವ್ಯ ಭವನ ಕಾಣಿಸಿತು. "ಆ ಭವನವನ್ನು ಯಾರು ಮೊದಲು ಸೇರುವರೋ ನೋಡುವಾ" ಎಂದು ಮೂವರೂ ತಮ್ಮ ತಮ್ಮ ಕುದುರೆಗಳನ್ನು ವೇಗವಾಗಿ ಬಿಟ್ಟರು. ಉದಯನನ ಕುದುರೆ ಶರವೇಗದಿಂದ ಓಡುತ್ತಿದೆ. ಆತನಿಗೆ ಸ್ವಲ್ಪ ಹಿಂದೆ ಸಂಧ್ಯಾ, ನಿಶೀಥರು ಸಮವೇಗದಿಂದ ಬರುತ್ತಿದ್ದಾರೆ. ಆದರೆ ಒಂದು ವಿಚಿತ್ರವಾಯಿತು. ಮುಂದೆ ಹೋಗುತ್ತಿದ್ದ ಉದಯನನು ಎವೆಯಿಕ್ಕುವಷ್ಟರಲ್ಲಿ ಇದ್ದಕ್ಕಿದ್ದಂತೆ ಮಾಯವಾಗಿ ಬಿಟ್ಟನು.

(ಉದಯನನು ಏನಾದ? ಆ ಭವನಕ್ಕೂ ಆತನು ಮಾಯವಾದುದಕ್ಕೂ ಏನಾದರೂ ಸಂಬಂಧವಿದೆಯೆ? ಮೂವರು ಸಹೋದರರು ಮತ್ತೆ ಒಂದೆಡೆ ಸಂಧಿಸುವರೆ? ಎಲ್ಲದಕ್ಕೂ ಬರುವ ತಿಂಗಳ 'ಚಂದಮಾಮ' ನೋಡಿ)






ಪೂರ್ವಕಾಲದಲ್ಲಿ ಅಂದರೆ ಸುಮಾರು ಇನ್ನೂರು ವರ್ಷಗಳ ಹಿಂದೆ ಸಿಂಹಾಚಲ ದೇವಾಲಯದಲ್ಲಿ ಒಂದು ವಿಚಿತ್ರ ನಡೆಯಿತು. ಅದೇನು ಗೊತ್ತೇ?

ಸಿಂಹಾದ್ರಿ ನರಸಿಂಹ ಸ್ವಾಮಿಗೆ ಕೃಷ್ಣ ಮಾಚಾರ್ಯ ಎಂಬ ಅಂತರಂಗ ಭಕ್ತರೊಬ್ಬರಿದ್ದರು. ಆ ವೈಷ್ಣವೋತ್ತಮರು ಅತಿ ಭಕ್ತಿಪೂರ್ವಕವಾಗಿ ಮಧುರಗಾನ ಮಾಡಲು, ಸ್ವಾಮಿ ಮೆಚ್ಚಿಕೊಂಡು ಅವರ ಮುಂದೆ ಪ್ರತ್ಯಕ್ಷವಾಗಿ, ಆಚಾರ್ಯರು ಹಾಡುವ ಸಂಗೀತಕ್ಕೆ ಅನುಗುಣವಾಗಿ ನರ್ತನ ಮಾಡುತ್ತಿದ್ದ. ಹೀಗೇ ನಡೆಯುತ್ತಿರುವಲ್ಲಿ ಕಾಲಕ್ರಮೇಣ ಆಚಾರ್ಯರಿಗೆ ಒಂದು ಬಗೆಯ ಅಹಂಕಾರ ವುಂಟಾಯಿತು. 'ಸಿಂಹಾದ್ರಿನಾಥನಿಗೆ ನಾನೇ ಪ್ರಿಯ ಭಕ್ತ. ದೇವರು ನಾನು ಹೇಳಿದಂತೆ ಮಾಡುತ್ತಾನೆ' ಎಂದು ಮನಸ್ಸಿನಲ್ಲೇ ಅಭಿಮಾನದಿಂದ ಅಂದುಕೊಳ್ಳುತ್ತಿದ್ದರು.

ಇದೇ ಸಮಯಕ್ಕೆ ವಿಶಿಷ್ಟಾದ್ವೈತ ಮತವನ್ನು ಉದ್ಧಾರ ಮಾಡಿದ ಶ್ರೀರಾಮಾನುಜಾಚಾರ್ಯರು ದಿಗ್ವಿಜಯ ಯಾತ್ರೆಯನ್ನು ಮಾಡುತ್ತಾ ಈ ದೇವಾಲಯಕ್ಕೆ ಬಿಜಯ ಮಾಡಿದರು. ಮಹಾನುಭಾವರಾದ ರಾಮಾನುಜರನ್ನು ಅವತಾರ ಪುರುಷರೆಂದೆಣಿಸಿ, ಎಲ್ಲರೂ ಪರಿಪರಿವಿಧದಲ್ಲಿ ಗೌರವ ತೋರುತ್ತಿದ್ದರೆ, ಕೃಷ್ಣಮಾಚಾರ್ಯರು ನಮಸ್ಕಾರ ಸಹ ಮಾಡದೆ 'ಆತ ನನಗಿಂತ ಹೆಚ್ಚೆ? ನಾನೇಕೆ ಮೇಲೆಬಿದ್ದು ನಮಸ್ಕಾರ ಮಾಡಲಿ?' ಎಂಬ ಅಹಂಭಾವವನ್ನು ತಾಳಿ, ಅವರಕಡೆ ನೋಡಲೂ ಇಲ್ಲ.

ಸರ್ವಜ್ಞರಾದ ರಾಮಾನುಜಾಚಾರ್ಯರು ಇಷ್ಟುಮಾತ್ರ ಗ್ರಹಿಸಲಾರರೆ? ಆ ಭಕ್ತರ ಮನಸ್ಸಿನಲ್ಲಿರುವುದನ್ನು ಅರಿತುಕೊಂಡರು. ಅವರೇ ಸ್ವತಃ ಕೃಷ್ಣಮಾಚಾರ್ಯರನ್ನು ಮಾತನಾಡಿಸಿ, ವಿನಯಪೂರ್ವಕವಾಗಿ "ಸ್ವಾಮಿ, ಕೃಷ್ಣಮಾಚಾರ್ಯೋತ್ತಮಾ, ನೀವು ನನಗೊಂದು ಉಪಕಾರ ಮಾಡಿ, ಸದುಪಾಯ ಹೇಳಬೇಕು. ಈ ರಾತ್ರಿ ಸಿಂಹಾದ್ರಿನಾಥನ ಸನ್ನಿಧಾನದಲ್ಲಿ ಶ್ರೀಗಳವರು ಗಾನ ಮಾಡಿ, ಆ ದೇವ ದೇವನನ್ನು ಪ್ರಸನ್ನ

ಸಿ. ಜಗನ್ನಾಥ, ವಿಜಯಪುರ.



ಚಿತ್ತನನ್ನಾಗಿ ಮಾಡಿಕೊಂಡ ತರುವಾಯ, ದಾಸನಿಗೆ ಮುಕ್ತಿ ಉಂಟೆ ಇಲ್ಲವೇ" ಎಂದು ಕೇಳಿ; ಅವರು ಏನು ಹೇಳುವರೋ ಲಾಲಿಸಿ, ತರುವಾಯ ನಿಮಗೆ ಮೋಕ್ಷಪ್ರಾಪ್ತ ವಾಗುವುದೋ ಇಲ್ಲವೋ ಎಂಬುದನ್ನೂ ಸಹ ಪ್ರಶ್ನೆಮಾಡಿ ದೇವರು ಹೇಳತಕ್ಕಂತಹ ವಿಷ ಯವನ್ನು ಜಾಗರೂಕತೆಯಿಂದ ಕೇಳಿ ತಿಳಿದು ಕೊಂಡು ನಾಳೆ ಬೆಳಿಗ್ಗೆ ಈ ದಾಸನಿಗೆ ತಿಳಿಸುವಿರಾ?" ಎಂದು ಕೇಳಿದರು.

ಈ ಮಾತುಗಳನ್ನು ಕೇಳಿ ಕೃಷ್ಣಮಾ ಚಾರ್ಯರು ತುಂಬಾ ಸಂತಸಗೊಂಡರು. ಏಕೆಂದರೆ ಅವತಾರ ಮೂರ್ತಿಯೆಂದು ಯಾರಿಗೆ ಜನರೆಲ್ಲರೂ ಸೇವೆ ಮಾಡುತ್ತಿರು ವರೋ ಆ ರಾಮಾನುಜನೇ ತನ್ನನ್ನು ಈರೀತಿ ಆಶ್ರಯಿಸುವುದಕ್ಕಿಂತಲೂ ಬೇರೇನು ಬೇಕು.?

ಆದುದರಿಂದ ಅಂದು ರಾತ್ರಿಯೇ ತನ್ನ ದಿವ್ಯಗಾನದಿಂದ ಸ್ವಾಮಿಯನ್ನು ಮೆಚ್ಚಿಸಿ, ಪ್ರತ್ಯಕ್ಷ ಮಾಡಿಸಿಕೊಂಡು, "ದೇವಾಧಿ ದೇವಾ, ದಕ್ಷಿಣ ದೇಶದಿಂದ ರಾಮಾ ನುಜಾಚಾರ್ಯನೆಂಬ ಯತಿಪುಂಗವನೊಬ್ಬ ಬಂದಿದ್ದಾನೆ. ಆತನಿಗೆ ಮುಕ್ತಿ ಉಂಟೋ ಇಲ್ಲವೋ ಎಂಬ ವಿಷಯವನ್ನು ತಮ್ಮನ್ನು ಕೇಳಿ ಹೇಳುವಂತೆ ಬೇಡಿಕೊಂಡ. ತಮ್ಮ ಅಪ್ಪಣೆ ಏನು?" ಎಂದು ಕೇಳಿದರು.

ಆಗ ಸಿಂಹಾದ್ರಿನಾಥನು "ಎಲೈ ಭಕ್ತ ವರೇಣ್ಯಾ, ಆ ರಾಮಾನುಜನು ಕೇವಲ ಯತಿ ಪುಂಗವನೆಂದು ನೆನೆಸಿದೆಯಾ? ಆತನು ಇಷ್ಟ ಪಟ್ಟವರಿಗೇ ಮುಕ್ತಿ ಕೊಡ ಬಲ್ಲವ ನಾಗಿರುವಾಗ ಆತನಿಗೆ ಮುಕ್ತಿಯುಂಟೇ, ಇಲ್ಲವೇ ಎಂಬ ಪ್ರಶ್ನೆಯಿದೆಯೆ? ಅದರಲ್ಲಿ ಸಂದೇಹವಾದರೂ ಏಕೆ?" ಎಂದ.

"ಹಾಗಾದರೆ ನನಗೆ ಮೋಕ್ಷ ಪ್ರಾಪ್ತಿ ಯಾಗುವುದೇ, ಸ್ವಾಮಿ" ಎಂದು ಪ್ರಶ್ನೆ ಹಾಕಿದರು ಕೃಷ್ಣಮಾಚಾರ್ಯರು. ಅದಕ್ಕೆ ಆ ದೇವದೇವನು "ಎಲೈ ಕೃಷ್ಣಮಾಚಾರ್ಯ ನೀನು ನನ್ನ ಪ್ರಿಯ ಭಕ್ತನೇನೋ ಹೌದು. ಆದರೆ ನಿನಗೆ ಮೋಕ್ಷ ನೀಡಲು ಮಾತ್ರ ನನಗೆ ಅಧಿಕಾರವಿಲ್ಲ. ಏಕೆನ್ನುವೆಯೋ ಕೇಳು, ಮೋಕ್ಷ ಕೊಡುವ ಅಧಿಕಾರವನ್ನು ಈಗಾ ಗಲೇ ರಾಮಾನುಜಾಚಾರ್ಯರಿಗೆ ಕೊಟ್ಟು ಬಿಟ್ಟಿದ್ದೇನೆ. ಯಾರಿಗೆ ಮೋಕ್ಷ ಕೊಡಬೇಕಾ ದರೂ ಆತನೇ ಸರ್ವಾಧಿಕಾರಿ. ಆದ್ದರಿಂದ

ನಿನಗೆ ಮೋಕ್ಷ ಬೇಕಿದ್ದರೆ ನೀನು ಹೋಗಿ ಆತನನ್ನೇ ಆಶ್ರಯಿಸ ಬೇಕಾಗುತ್ತದೆ" ಎಂದನು.

ಭಗವಂತನ ಮಾತು ಕೇಳಿದಕೂಡಲೇ ಅಹಂಕಾರ ಮದದಿಂದ ಉಗ್ರವಾದರು ಕೃಷ್ಣಮಾಚಾರ್ಯರು "ಇಷ್ಟುಕಾಲ ನಿನ್ನನ್ನು ಆಶ್ರಯಿಸಿದ ಫಲವಿದೇಯೆ? ಪರಮಪದಕ್ಕಾಗಿ ಪರರನ್ನು ಪ್ರಾರ್ಥಿಸುವಂತೆ ಪೇಳುವೆಯಾ? ಅಚಲ ಭಕ್ತಿಯಿಂದ ಇಷ್ಟುಮಾಸ ಕಾಲ ನಿನ್ನನ್ನು ಹೊಗಳಿ ಹಾಡಿದೆನಲ್ಲಾ! ಕೊನೆಗೆ ನನ್ನನ್ನು ಹೀಗೆ ಮೋಸ ಮಾಡುವೆಯಾ?" ಎಂದು ಬಾಯಿಗೆ ಬಂದಂತೆ ನಿಷ್ಠೂರವಾಗಿ ಮಾತನಾಡಿದರು.

ಈ ನಿಷ್ಠೂರ ಮಾತುಗಳನ್ನು ಸಹಿಸಲಾರದಾದ ಸಿಂಹಾದ್ರಿನಾಥ, "ಕೃಷ್ಣಮಾಚಾರ್ಯ, ನೀನು ರಾಜಸಿ. ತಾಮಸಿ. ಭಕ್ತಿಯಿಂದ ಹಾಡಿದೆನೆಂದು ದೊಡ್ಡದಾಗಿ ಹೇಳಿಕೊಳ್ಳುತ್ತಿರುವೆ. ನೀನು ಹಾಡಿದೆ, ನಾನು ಆಡಿದೆ. ನಿನ್ನ ಹಾಡಿಗೂ, ನನ್ನ ನಾಟ್ಯಕ್ಕೂ ಸರಿಹೋಯಿತು. ಮತ್ತೇನು ಬಾಕಿ ಉಳಿಯಲಿಲ್ಲ. ಈಗ ಅಸಂಬದ್ಧವಾಗಿ ಉದ್ರೇಕಗೊಂಡು ನೀನು ನನ್ನನ್ನು ಕುರಿತು ಕಠಿಣ ವಚನಗಳನ್ನು ಹೇಳಿದೆಯಾದ್ದರಿಂದ, ನೀನು ರಚಿಸಿದ ಕೀರ್ತನೆಗಳೆಲ್ಲವೂ ನೀಚರ ಪಾಲಾಗಲಿ" ಎಂದು ಶಾಪವಿತ್ತನು.

ದೇವರು ಹೀಗೆ ಶಾಪ ಕೊಡಲು, ಆತನ ಭಕ್ತರಾದ ಕೃಷ್ಣಮಾಚಾರ್ಯರಿಗೂ ತೀವ್ರ



ವಾದ ಕೋಪ ಬಂತು. "ಎಲೈ ದೇವನೇ, ಸರ್ವವೂ ನೀನೇ ಎಂದು ನಂಬಿದ್ದ ನನ್ನನ್ನು ಮೋಸಗೊಳಿಸಿದೆ. ನನ್ನ ಜೀವನವನ್ನು ನಾಶ ಮಾಡಿದೆ. ಇದೋ, ನಾನೇ ನಿನಗೆ ನಿಜವಾದ ಭಕ್ತನಾಗಿದ್ದ ಪಕ್ಷದಲ್ಲಿ, ನಿನ್ನ ಆಲಯವು ಒಂದೇ ಸವನೆ ಏಳು ದಿನ ಉರಿದು, ಗೋಪುರ, ಮಂಟಪಗಳು ಕಳೆಕಾಂತಿಗಳಿಲ್ಲದೆ ಹಾಳಾಗಿ ಹೋಗಲಿ" ಎಂದು ಸಿಂಹಾದ್ರಿನಾಥನಿಗೆ ಪ್ರತಿಶಾಪ ಕೊಟ್ಟರು.

ಸಿಂಹಾದ್ರಿನಾಥನ ಶಾಪದಿಂದ ಕೃಷ್ಣಮಾಚಾರ್ಯರ ಕೀರ್ತನೆಗಳೆಲ್ಲವೂ ನೀಚರ ವಶವಾಯಿತು, ಕೃಷ್ಣಮಾಚಾರ್ಯರ ಶಾಪದಿಂದ ಕೆಲ ದಿನಗಳಲ್ಲೇ, 'ಮಲಿಕಿನೇಬ್' ಎಂಬ ಮ್ಲೇಚ್ಛ ನಾಯಕನು ಭಾರಿ ಸೇನೆಯೊಂದಿಗೆ ಬಂದು ಸಿಂಹಾಚಲ ಕ್ಷೇತ್ರವನ್ನು

ಧ್ವಂಸಮಾಡಲು ಪ್ರಯತ್ನಿಸಿದ. ಕ್ರೂರರಾದ ಆ ಯವನರು ಆಲಯವನ್ನು ಮುತ್ತಿ ಆಕ್ರಮಿಸುವರೆಂಬ ವರ್ತಮಾನ ಮಹಾ ಭಕ್ತನೂ, ಮಹಾ ಕವಿಯೂ ಆದ ಗೋಗುಲಪಾಟಿ ಕೂರ್ಮನಾಥನಿಗೆ ಮೊದಲೇ ತಿಳಿದುಬಂತು. ಯಾರಿಗೂ ಅರಿಯದಂತೆ ಆತನು ಕೂಡಲೇ ದೇವಾಲಯದ ಗರ್ಭ ಗುಡಿಯೊಳಕ್ಕೆಹೋಗಿ ಕುಳಿತುಕೊಂಡು ಪರಮ ಭಕ್ತಿಯಿಂದ, ಸಿಂಹಾದ್ರಿ ದೇವರನ್ನು ಪ್ರಾರ್ಥಿಸಿದ. ಆ ಪ್ರಾರ್ಥನೆಯ ಫಲವಾಗಿ ಆತನಿಗೆ ಕವಿತಾ ಪ್ರಭಾವವುಂಟಾಗಿ "ವೈರಿಹರರಂಹಾ, ಸಿಂಹಾದ್ರಿ ನರಸಿಂಹಾ!" ಎಂಬ ಪಲ್ಲವಿಯಿಂದ ಸೀಸ ಪದ್ಯಗಳನ್ನು ಭಕ್ತಿ ದೈನ್ಯಗಳಿಂದಕೂಡಿ ಭಜಿಸಿ ಹಾಡಲಾರಂಭಿಸಿದ. ಆ ಪದ್ಯಗಳಲ್ಲಿ ಕೂರ್ಮನಾಥ ಕವಿಯು, ಆ ಯವನರು ಮಾಡುತ್ತಿರುವ ಘೋರ ಕೃತ್ಯಗಳನ್ನು ನಿಲ್ಲಿಸುವಂತೆಯೂ, ಶತ್ರುಗಳನ್ನು ನಾಶ ಮಾಡುವಂತೆಯೂ ಪ್ರಾರ್ಥಿಸಿದ. ಸಿಂಹಾದ್ರಿನಾಥನ ದುರ್ಬಲತೆಯನ್ನು ಕೆಣಕಿ ಅರವತ್ತೂ ಪದ್ಯಗಳಲ್ಲಿ ನಿಷ್ಠೂರವಾಗಿ ಬಣ್ಣಿಸಿದ.

ಕೂರ್ಮನಾಥನು ಅರವತ್ತೆಂಟನೆಯ ಪದ್ಯ ಹಾಡಿದಕೂಡಲೇ, ಕವಿ ಚಂದ್ರನ ಭಕ್ತಿಗೆ ಸಂತಸಗೊಂಡು ಆ ದೇವದೇವನು ಅಸಂಖ್ಯಾತವಾಗಿ ಗಂಡು ಜೇನುಗಳನ್ನು ಸೃಷ್ಟಿಸಿದ. ಆ ಜೇನುಗಳ ಗುಂಪು ಯವನರ ಸೇನೆಯನ್ನು ಮರ್ಧಿಸುತ್ತಾ ತಮ್ಮ ಚೂಪಾದ ಕೊಂಡಿಗಳಿಂದ ಚುಚ್ಚುತ್ತಾ, ಸಿಗಿದು ಚೆಂಡಾಡುತ್ತಾ ಸುಮಾರು ಹತ್ತು ಮೈಲಿ ದೂರ ಶತ್ರು ಸೇನೆಯನ್ನು ಓಡಿಸಿತು.

ಈ ಬಾಧೆಗೆ ತಾಳಲಾರದೆ ಯವನರ ಸೇನೆ ವಾಲ್ಟೇರಿಗೆ ಅರವತ್ತು ಮೈಲಿ ದೂರದಲ್ಲಿರುವ ಒಂದು ದಿನ್ನೆಯವರೆವಿಗೂ ಓಡಿತು. ಅಂದಿನಿಂದ ಆ ದಿನ್ನೆಗೆ 'ಜೇನಿನ ದಿಬ್ಬ' ಎಂಬ ಹೆಸರಾಯಿತು. ವಿಶಾಖಪಟ್ಟಣಕ್ಕೆ ಅದು ಶ್ಮಶಾನ ಭೂಮಿಯಾಗಿ ಇಂದು ಉಪಯೋಗುವಾಗುತ್ತಿದೆ. ಈ ವಿಧವಾಗಿ ಕೂರ್ಮನಾಥ ಕವಿಯ ಉಕ್ತಿಗಳಿಂದ ಸಿಂಹಾಚಲ ಕ್ಷೇತ್ರಕ್ಕೆ ಕ್ಷೇಮವುಂಟಾಯಿತು. ತರುವಾಯ ಕೂರ್ಮನಾಥ ಕವಿ ತನ್ನ ನರಸಿಂಹ ಶತಕದಲ್ಲಿ ಸ್ವಾಮಿಯ ಮಹಿಮೆಯನ್ನು ಕೊಂಡಾಡುತ್ತಾ ಕೆಲವು ಕ್ಷಮಾಪಣೆಯ ಪದ್ಯಗಳನ್ನು ಸೊಗುಸಾಗಿ ವರ್ಣಿಸಿದ್ದಾನೆ.






**ಪೂ**ರ್ವಕಾಲದಲ್ಲಿ ಪತಿವ್ರತೆಯರೆಲ್ಲರೂ ಒಂದೆಡೆ ಸೇರಿ ದೊಡ್ಡ ಸಭೆಯನ್ನು ಏರ್ಪಡಿಸಿದರು. ಏರ್ಪಾಡೇನೋ ಆಯಿತು ಆದರೆ ಅದು ಪೂರ್ಣವಾಗಲಿಲ್ಲ. ಏಕೆಂದರೆ ಯಾವ ಸಭೆಗಾದರೂ ಒಬ್ಬ ಅಧ್ಯಕ್ಷನೋ, ಅಧ್ಯಕ್ಷಿಣಿಯೋ ಇರಬೇಕಲ್ಲವೆ? 'ಈ ಸಭೆಗೆ ಯಾರನ್ನು ಅಧ್ಯಕ್ಷಿಣಿಯನ್ನಾಗಿ ಆರಿಸಿದರೆ ಚೆನ್ನಾಗಿರುತ್ತೆ' ಎಂಬ ಅವರ ಸಮಸ್ಯೆ ಬಗೆಹರಿಯಲಿಲ್ಲ. ಅವರಲ್ಲಿ ಎಷ್ಟೋ ಪಕ್ಷ ಪ್ರತಿಪಕ್ಷಗಳಿದ್ದುದರಿಂದ, ವಾದವಿವಾದಗಳು ಹೆಚ್ಚಿ ನಾಲ್ಕೈದು ಗಂಟೆ ವಿಫಲ ಚರ್ಚೆ ನಡೆದರೂ, ಒಂದು ನಿರ್ಧಾರಕ್ಕೂ ಬರಲಾರದೆ, ಸಭೆಯನ್ನು ಅಂದಿಗೆ ಮುಕ್ತಾಯ ಮಾಡಿ, ಅವರವರ ಮನೆಗಳಿಗೆ ಹೊರಟರು.

ಹಾಗೆ ಹೋದನಂತರ ಸುಮ್ಮನಿದ್ದರೆ? ಸರಸ್ವತಿ ತನ್ನ ಪತಿ ಬ್ರಹ್ಮದೇವನೊಂದಿಗೆ "ನೋಡಿದಿರಾ, ಎಂತಹ ಕೆಲಸ ಮಾಡಿದರು, ಅವರೆಲ್ಲಾ ಸೇರಿ? ಸಾನು ಮಹಾ ಪತಿವ್ರತೆಯಲ್ಲವೆ? ಪತಿವ್ರತೆಯಾದುದರಿಂದಲೇ ಅಲ್ಲವೇ ನೀವು ಸನ್ನನ್ನು ಸದಾ ಸಾಲಿಗೆಯ ಮೇಲೆ ಇಟ್ಟುಕೊಂಡಿರುವಿರಿ?" ಎಂದಳು.

ಲಕ್ಷ್ಮಿ ವಿಷ್ಣುವಿನೊಂದಿಗೆ, ಸರಸ್ವತಿಯಂತೆಯೇ ದೂರುಕೊಟ್ಟು "ಈಲೋಕದಲ್ಲಿ ನನಗಿಂತಲೂ ಪತಿವ್ರತೆಯಾರು? ನನ್ನನ್ನು ಮೆಚ್ಚಿಕೊಂಡುತಾನೇ ನನಗೆ ನಿಮ್ಮ ವಕ್ಷಸ್ಥಳದಲ್ಲಿ ಜಾಗಕೊಟ್ಟಿರಿ" ಎಂದಳು.

ಪಾರ್ವತಿ ತನ್ನ ಗಂಡನೊಂದಿಗೆ "ನೀವು ನನಗೆ ಅರ್ಧ ಶರೀರವನ್ನೇ ಕೊಟ್ಟಿರುವಿರಿ. ನಾನು ಮಹಾ ಪತಿವ್ರತೆಯೆಂದುತಾನೇ ಹೀಗೆ ಮಾಡಿರುವುದು?" ಎಂದು ಕೇಳಿದಳು. ಸೀತೆ, ಸಾವಿತ್ರಿ, ಅರುಂಧತಿ, ಅನಸೂಯ, ಸುಮತಿ ಮುಂತಾದವರೂ ಸಹ ತಮ್ಮ ತಮ್ಮ ಗಂಡಂದಿರಲ್ಲಿ ತಮ್ಮ ದೊಡ್ಡಸ್ತಿಕೆ ಹೇಳಿಕೊಂಡು, ಅಧ್ಯಕ್ಷಿಣಿಯ ಪೀಠ ತಮಗೆ ಬರಲಿಲ್ಲವೆಂದು ಖಿನ್ನರಾದರು. ಇಷ್ಟರಲ್ಲಿ ನಾರದರು ಎಲ್ಲಿಂದಲೋ ಬಂದು, ಪ್ರತಿಯೊಬ್ಬ ಪತಿವ್ರತೆಯ ಮನೆಗೂ ಹೋಗಿ "ಏನು ತಾಯಿ, ನಿನಗಿಂತಲೂ ಮಹಾ ಪತಿವ್ರತೆ ಭೂಲೋಕದಲ್ಲಿ ಒಬ್ಬಾಕೆ ಇದ್ದಾಳೆ" ಎಂದು ಹೇಳುತ್ತಾ ಬಂದರು.

"ಯಮಧರ್ಮರಾಯನ ಕೈಯಿಂದ ಗಂಡನನ್ನು ಬದುಕಿಸಿ ಕೊಂಡು ಬಂದೆ ಸಾನು. ನನ

ಕೆ. ಮಹಲಕ್ಷ್ಮಮ್ಮ, ಕಡೂರು.



ಗಿಂತಲೂ ಹೆಚ್ಚೇ ಆಕೆ?" ಎಂದಳು ಸಾವಿತ್ರಿ. "ಮಾನವನ್ನು ಕಾಪಾಡಿಕೊಳ್ಳುವ ಸಲುವಾಗಿ ತ್ರಿಮೂರ್ತಿಗಳನ್ನು ಹಸುಳೆಗಳನ್ನಾಗಿ ಮಾಡಿ, ಹಾಲುಣಿಸಿದೆ. ನನಗಿಂತಲೂ ಹೆಚ್ಚೇ ನೀನು ಹೇಳಿದಾಕೆ" ಎಂದಳು ಅನಸೂಯ. "ಗಂಡನ ಪ್ರಾಣಗಳನ್ನು ಕಾಪಾಡಲು ಸೂರ್ಯನು ಉದಯವಾಗದಂತೆ ಮಾಡಿದೆ. ನನಗಿಂತಲೂ ಆಕೆ ಹೆಚ್ಚಿನವಳೇ?" ಎಂದಳು ಸುಮತಿ. ಹಾಗೇ ಮಿಕ್ಕವರೂ ಸಹ ಕೇಳಲು ನಾರದರು "ಹೌದಮ್ಮಾ, ನಿಮ್ಮೆಲ್ಲರಿಗಿಂತಲೂ ಆಕೆ ಶ್ರೇಷ್ಠಳು" ಎಂದು ಖಂಡ ತುಂಡವಾಗಿ ಹೇಳಿಬಿಟ್ಟರು.

ಅವರಿಗೆಲ್ಲಾ ಆಕೆ ಯಾರೋ, ಆಕೆಯ ಹಿರಿಮೆ ಎಂತಹುದೋ ನೋಡಬೇಕೆನ್ನಿಸಿತು. "ನೀವೆಲ್ಲಾ ಸೇರಿಕೊಂಡು ಹೊರಟರೆ ಆಕೆ ಭಯಪಡುವಳು." ನಿಮ್ಮಲ್ಲಿ ಯಾರಾದರೂ ಒಬ್ಬರು ಹೋಗಿ ನೋಡಿಕೊಂಡು ಬನ್ನಿ" ಎಂದರು ನಾರದರು. ನಾರದರ ಹತ್ತಿರದಿಂದ ಆ ಪತಿವ್ರತೆಯ ವಿಳಾಸ ತೆಗೆದುಕೊಂಡು ಮೊದಲು ಪಾರ್ವತಿ ದೇವಿ ಹೋದಳು.

ನಾರದರು ಹೇಳಿದ ಮನೆ ಒಂದು ಹುಲ್ಲಿನ ಜೋಪಡಿ. ಬಾಗಿಲಿಗೆ ಅಗುಳಿ ಹಾಕಿತ್ತು. ಪಾರ್ವತಿದೇವಿ ಹೊಸಲಿನ ಹತ್ತಿರ ನಿಂತು "ಯಾರಮ್ಮಾ ಒಳಗೆ? ನಾನು ಪಾರ್ವತಿ ದೇವಿ, ಸ್ವಲ್ಪ ಬಾಗಿಲು ತೆಗೆಯಿರಿ" ಎಂದಳು.

ಒಳಗಿರುವಾಕೆ ಬಾಗಿಲು ತೆಗೆಯದೆ "ಅಮ್ಮ ನೀವು ಬರುವಿರೆಂದು ಸ್ವಲ್ಪ ಮೊದಲೇ ನನಗೆ ತಿಳಿದಿದ್ದರೆ ಬಾಗಿಲು ತೆಗೆಯಬಹುದೇ ಎಂದು ನಮ್ಮ ಯಜಮಾನರನ್ನು ಕೇಳಿರುತ್ತಿದ್ದೆ. ಅವರು ಎಲ್ಲಿಗೋ ಹೋಗಿದ್ದಾರೆ. ಇಂದು ರಾತ್ರಿ ಬಂದಕೂಡಲೇ ಕೇಳಿ ಅವರ ಅಪ್ಪಣೆಯಾದರೆ ನಾಳೆ ಬಾಗಿಲು ತೆಗೆಯುತ್ತೇನೆ. ಆದುದರಿಂದ ದಯವಿಟ್ಟು ನಾಳೆ ಇಲ್ಲಿಗೆ ಒಂದು ಸಾರಿ ದಯಮಾಡಿಸಿ" ಎಂದಳು. ಪಾರ್ವತಿ ಅಚ್ಚರಿಗೊಂಡು ಮರು ಮಾತನಾಡದೆ ಕೈಲಾಸಕ್ಕೆ ಹಿಂತಿರುಗಿದಳು.

ಗುಡಿಸಿಲಲ್ಲಿದ್ದ ಆ ಮಹಾ ಪತಿವ್ರತೆಯ ಹೆಸರು ಗೌರಮ್ಮ. ಆಕೆ ಆ ಗ್ರಾಮದಲ್ಲಿ ಹುಲ್ಲು ಕೊಯ್ದು ಮಾರುವ ಗಂಗಯ್ಯನೆಂಬ ಬಡವನ ಮಡದಿ. ಗಂಗಯ್ಯ ಹುಲ್ಲಿನ ಕಂತೆ ಮಾರಿ, ಅಂದು ಸಾಯಂಕಾಲ ಮನೆಗೆ ಬಂದಾಗ ಗೌರಮ್ಮ ಗಂಡನೊಂದಿಗೆ

ಪಾರ್ವತಿದೇವಿ ಬಂದ ವಿಷಯ ಹೇಳಿ "ಆಕೆ ನಾಳೆ ಬಂದರೆ ಬಾಗಿಲು ತೆಗೆಯಲೇ" ಎಂದು ಕೇಳಿದಳು. ಅದಕ್ಕೆ ಗಂಗಯ್ಯ "ಓ, ಅದಕ್ಕೇನು, ಅಗತ್ಯವಾಗಿ ತೆಗೆ" ಎಂದ.

ಆ ಮರು ದಿನ ಪಾರ್ವತಿದೇವಿ ಮತ್ತೆ ಬಂದಳು. ತಾಯಿ ಎಲ್ಲಿಗೋ ಹೋಗುತ್ತಿರುವಳೆಂದು ಅರಿತ ವಿಘ್ನೇಶ್ವರ 'ನನ್ನನ್ನೂ ಕರದುಕೊಂಡು ಹೋಗಮ್ಮ' ಎಂದು ದುಂಬಾಲು ಬಿದ್ದ. ಗೌರಮ್ಮ ಪಾರ್ವತಿದೇವಿಗೆ ಬಾಗಿಲು ತೆಗೆಯುತ್ತಿರಲು ವಿಘ್ನೇಶ್ವರನ ಮಾತು ಕೇಳಿಸಿತು. "ಯಾರಮ್ಮ, ನಿಮ್ಮೊಂದಿಗೆ ಬಂದಿರುವುದು" ಎಂದು ಕೇಳಿದಳು. "ನಮ್ಮ ಹುಡುಗಕಣಮ್ಮ. ಗಣಪತಿ" ಎಂದಳು ಪಾರ್ವತಿ. ಗೌರಮ್ಮ ಬಾಗಿಲು ತೆಗೆಯಲಿಲ್ಲ. "ತಾಯಿ, ನಿಮ್ಮೊಬ್ಬರಿಗೆ ಬಾಗಿಲು ತೆಗೆಯಲು ಮಾತ್ರ ನಮ್ಮ ಯಜಮಾನರ ಅಪ್ಪಣೆ ಆಯಿತು. ನಿಮ್ಮ ಕುಮಾರರು ಬರುವ ಸಂಗತಿ ನನಗೆ ತಿಳಿದಿರಲಿಲ್ಲ. ಇಂದು ರಾತ್ರಿ ಅವರನ್ನು ಕೇಳಿ ನಿಮ್ಮ ಹುಡುಗನಿಗೂ ಬಾಗಿಲು ತೆಗೆಯಲು ಅಪ್ಪಣೆ ಪಡೆಯುವೆನು. ಆದ್ದರಿಂದ ನೀವಿಬ್ಬರೂ ನಾಳೆ ದಯುವಿಟ್ಟು ಬನ್ನಿ" ಎಂದು ಕಳುಹಿಸಿ ಬಿಟ್ಟಳು. 'ದೇವರೇ' ಎಂದು ಪಾರ್ವತಿ ಕೈಲಾಸಕ್ಕೆ ಹಿಂತಿರುಗಿ, ಮರುದಿನ ಮತ್ತೆ ಬಂದಳು. ಈ ಸಾರಿ ಕುಮಾರಸ್ವಾಮಿ 'ನಾನೂ ಬರುತ್ತೇನೆ' ಎಂದ. ಆದರೆ ಅವನು ಬಂದನೆಂಬ ಕಾರಣದಿಂದ ಗೌರಮ್ಮ ತನಗೆ ಎಲ್ಲಿ ಬಾಗಿಲು ತೆಗೆಯುವುದಿಲ್ಲವೋ ಎಂಬ ಭಯದಿಂದ ಪಾರ್ವತಿ ಆತನನ್ನು ಕರೆದುಕೊಂಡು ಬರಲಿಲ್ಲ. ಗೌರಮ್ಮ ಈ ಸಾರಿ ಪಾರ್ವತಿ ದೇವಿ ಬಂದ ಕೂಡಲೇ ಬಾಗಿಲು ತೆಗೆದು "ದಯಮಾಡಿ" ಎಂದು ಗೌರವಾದರಗಳಿಂದ ಬರಮಾಡಿಕೊಂಡಳು. ಪಾರ್ವತಿ ಆ ಗುಡುಸಲನ್ನು ಒಂದು ಸಾರಿ ಪರೀಕ್ಷಿಸಿ ನೋಡಿದಳು. ಗೌರಮ್ಮನಿಗಿರುವ ಶುಚಿ, ಶುಭ್ರತೆಗಳನ್ನು ಮೆಚ್ಚಿಕೊಂಡಳು. ಆ ಮನೆಯಲ್ಲಿ ಅಷ್ಟೇನೂ ಸಾಮಾನುಗಳಿರಲಿಲ್ಲ. ಒಂದು ಮುಕ್ಕಾಲುಮಣೆ, ಹಾಸಿದ್ದ ಹಾಸಿಗೆ, ಒಂದು ನೂಲುಮಂಚ, ಮಣ್ಣಿನ ಮಡಿಕೆ, ಉರಿಯುತ್ತಿದ್ದ ಒಲೆ, ಪಕ್ಕದಲ್ಲಿ ಬಾಂಡ್ಲಿ, ಹಿಟ್ಟು ಇತ್ತು. ಸೂರಿನಿಂದ ನೇತಾಡುತ್ತಿದ್ದ ಒಂದು ಹಗ್ಗ, ಚಿಲುಕಕ್ಕೆ ತಗುಲಿ ಹಾಕಿದ್ದ ಒಂದು ಬೆತ್ತ ಸಹ ಕಾಣಿಸಿತು.



ಪಾರ್ವತಿದೇವಿ ಮಾತು ಮುಂದುವರಿಸಲು ಒಂದೊಂದು ವಸ್ತುವನ್ನೇ ತೋರಿಸಿ "ಇದು ಏಕೆ? ಇದೇಕೆ?" ಎಂದು ಗೌರಮ್ಮನನ್ನು ಕೇಳಿದಳು. ಅದಕ್ಕೆ ಆಕೆ "ನಮ್ಮ ಯಜಮಾನರು ಆಯಾಸಗೊಂಡು ಮನೆಗೆ ಬಂದರೆ ಕುಳಿತುಕೊಳ್ಳಲು ಮುಕ್ಕಾಲು ಮಣೆ. ಸ್ವಲ್ಪ ಆಯಾಸ ಕಳೆಯ ಬೇಕಾದರೆ ಆ ಹಾಸಿಗೆ ಇರುವ ಮಂಚದ ಮೇಲೆ ಮಲಗುತ್ತಾರೆ. 'ಹಸಿವಾಗುತ್ತಿದೆ, ಅನ್ನ' ಎಂದರೆ ಈ ಮಡಕೆಯಲ್ಲಿ ಅನ್ನ ಸಿದ್ಧವಾಗಿರುತ್ತದೆ. ಅನ್ನ ಬೇಡ, ಬಿಸಿ ಬಿಸಿಯಾಗಿ ರೊಟ್ಟಿ ಮಾಡಿ ಕೊಡು ಎಂದು ಕೇಳಿದರೆ, ಆಗ ಹುಡುಕಾಡುವ ಬದಲು ಹಿಟ್ಟು, ಉರಿಯುತ್ತಿರುವ ಒಲೆ ಎಲ್ಲಾ ಸಿದ್ಧವಾಗಿಟ್ಟದ್ದೇನೆ" ಎಂದು ಉತ್ತರ ಹೇಳಿದಳು.

ಈ ಬಡವಳು ತನ್ನ ಗಂಡನಿಗಾಗಿ ಮಾಡಿರುವ ಏರ್ಪಾಟುಗಳೆಲ್ಲವನ್ನೂ ಕಂಡು ಪಾರ್ವತಿ ಮೆಚ್ಚಿಕೊಂಡಳು. ಆದರೆ ಆಕೆಗೆ ಆ ಹಗ್ಗ ಬೆತ್ತ ಏಕಿರುವದೋ ತಿಳಿಯದಾಯಿತು. ಅವುಗಳ ವಿಷಯ ಕೇಳಲು "ತಾಯಿ, ನನ್ನ ತಿಳಿಗೇಡಿತನದಿಂದ ಯಾವಾಗಲಾದರೂ ನಮ್ಮ ಯಜಮಾನರಿಗೆ ಕೋಪ ಬಂತೆಂದರೆ ಅವರು ನನ್ನನ್ನು ಈ ಹಗ್ಗದಿಂದ ಕಟ್ಟಿಹಾಕಿ ಬೆತ್ತದಿಂದ ಹೊಡೆಯಬೇಕಾಗಿ ಬರುತ್ತದೆ. ಬೆಳಗಿನಿಂದ ಸಂಜೆವರೆವಿಗೂ ದುಡಿದು ದುಡಿದು ಬಳಲಿ ಬಂದವರು ಹಗ್ಗ, ಬೆತ್ತ ಹುಡುಕಾಡಲು ಸಾಧ್ಯವೇ? ಅದಕ್ಕೆಂತಲೇ ಅವುಗಳನ್ನೂ ಸಿದ್ಧ ಮಾಡಿಟ್ಟಿದ್ದೇನೆ." ಎಂದು ಹೇಳಿದಳು.

ಈ ಮಾತು ಕೇಳಿದ ಕೂಡಲೇ ಪಾರ್ವತಿ ದೇವಿಯ ಆಶ್ಚರ್ಯಕ್ಕೆ ಎಣೆಯಿಲ್ಲ. "ಮಹಾ ಪತಿವ್ರತೆಗಳೆಂದುಕೊಂಡು ಹೆಸರು ಪಡೆದ ನಾವೆಲ್ಲರೂ ಪತಿಗೆ ಕೋಪ ಬಂದು ಹೊಡೆದರೆ ಪ್ರತಿ ಹೇಳದೆ ಸುಮ್ಮನಿರುವೆವೇ ಹೊರತು, ಈಕೆಯಂತೆ ಹಗ್ಗ, ಬೆತ್ತ ಸಿದ್ಧ ಮಾಡಿಟ್ಟುಕೊಂಡಿಲ್ಲ. ನಾರದನು ಹೇಳಿದ ಮಾತು ನಿಜ, ಈ ಗೌರಮ್ಮ ನಮ್ಮೆಲ್ಲರಿಗಿಂತಲೂ ಮಹಾ ಪತಿವ್ರತೆ" ಎಂದು ಮೆಚ್ಚಿಕೊಂಡು ಹೋಗಿ, ಈ ಸುದ್ದಿ ಮಿಕ್ಕವರಿಗೆಲ್ಲಾ ಹೇಳಿದಳು.





# ಪಂಡಿತರಾಯ



ಗೋದಾವರಿ ಪ್ರಾಂತದಲ್ಲಿ ಪಂಡಿತ ಭಟ್ಟನೆಂಬ ಒಬ್ಬ ಬ್ರಾಹ್ಮಣನಿದ್ದನು. ಆತನಿಗೆ ವರಸೆಯಾಗಿ ಏಳುಜನ ಮಕ್ಕಳು ಜನಿಸಿದರು. ಆದರೆ ಒಬ್ಬರೂ ಉಳಿಯಲಿಲ್ಲ. ಎಂಟನೇ ಸಾರಿ ಆತನ ಪತ್ನಿಗೆ ತಿಂಗಳು ತುಂಬುವ ಸಮಯದಲ್ಲಿ, ಆಕೆ ತುಂಬ ಹೆದರಿದಳು. 'ಈಗ ಹುಟ್ಟುವ ಮಗು ಮಾತ್ರ ಬದುಕುವುದೇ? ಇಂತಹ ದಾರುಣವಾದ ಶೋಕವುಂಟಾಗಲು ನಾನು ಮಾಡಿದ ಪಾಪವಾದರೂ ಏನು?" ಎಂದು ದುಃಖಿಸುತ್ತಿದ್ದಳು.

ಇಷ್ಟರಲ್ಲಿ ಆ ದಾರಿಯಲ್ಲಿ ಹೋಗುತ್ತಿದ್ದ ಫಕೀರನೊಬ್ಬನು ಅಲ್ಲಿನಿಂತು "ಅಲ್ಲಾಹೋ ಅಕ್ಬರ್" ಎಂದನು. ಆ ಮಾತು ಕೇಳಿ ಪಂಡಿತಭಟ್ಟನ ಪತ್ನಿಯು "ನಿಮ್ಮ ಅಲ್ಲಾ ತುಂಬಾ ಗಟ್ಟಿಗನೇನೋ ಹೌದು. ಆದರೆ ನನಗೆ ಈ ದುಃಖವಿಲ್ಲದಂತೆ ಮಾಡಹೇಳು, ನೋಡೋಣ" ಎಂದಳು ಫಕೀರನೊಂದಿಗೆ.

"ಅಗತ್ಯವಾಗಿ ಮಾಡುತ್ತಾನೆ. ಈಗ ಜನಿಸುವ ನಿಮ್ಮ ಕುಮಾರನಿಗೆ ಆಯುಸ್ಸು, ಆರೋಗ್ಯ, ಪಾಂಡಿತ್ಯ, ಐಶ್ವರ್ಯಗಳು ಕೂಡುವಂತೆ ನಮ್ಮ ಅಲ್ಲಾರವರಲ್ಲಿ ಪ್ರಾರ್ಥಿಸುತ್ತೇನೆ" ಎಂದು ಹೇಳಿ, ಆ ಫಕೀರನು ಕೂಡಲೇ ಮಸೀದಿಗೇ ಹೋಗಿ ಪ್ರಾರ್ಥನೆ ಸಲ್ಲಿಸಿದನು.

ಆ ಫಕೀರ ತುಂಬಾ ಭಕ್ತನಿರಬೇಕು. ಆತನ ಪ್ರಾರ್ಥನೆಯಂತೆಯೇ ಎಲ್ಲಾ ನಡೆಯಿತು. ಒಂಬತ್ತು ತಿಂಗಳು ತುಂಬಿದ ತರುವಾಯ ಪಂಡಿತ ಭಟ್ಟನ ಪತ್ನಿ ಬಾಲಸೂರ್ಯನಂತಹ ಬಾಲಕನನ್ನು ಹೆತ್ತಳು. ಆತನಿಗೆ ತಂದೆತಾಯಿಗಳು ಜಗನ್ನಾಥ ಎಂದು ನಾಮಕರಣ ಮಾಡಿದರು. ಆತನು ದಿನೇ ದಿನೇ ಪ್ರವರ್ಧಮಾನನಾಗಿ, ದೊಡ್ಡವನಾಗಿ ಸಮಸ್ತ ವಿದ್ಯೆ ಮತ್ತು ವೇದಶಾಸ್ತ್ರಗಳೇ ಅಲ್ಲದೆ, ಬಿಲ್ಲು ವಿದ್ಯೆಯನ್ನು ಸಹ ಕಲಿತು ವೀರನೆನ್ನಿಸಿಕೊಂಡನು.

ಆ ಕಾಲದಲ್ಲಿ ಡಿಲ್ಲಿ ಸಿಂಹಾಸನದ ಮೇಲೆ ಕುಳಿತು ರಾಜ್ಯವನ್ನು ಆಳುತ್ತಿದ್ದ ಬಾದಶಹನಿಗೆ ಸಹ ಪಂಡಿತ ಭಟ್ಟನಿಗೆ ಒದಗಿದ ದುರವಸ್ಥೆಯಂತಹುದೇ ಬಂತು. ಸಾಲಾಗಿ ಆತನ ಬೇಗಂ ಏಳು ಜನ ಕುವರಿಯರನ್ನು

ಶಂಭುಲಿಂಗಯ್ಯ, ಬಳ್ಳಾರಿ.



ಹೆರುವುದು, ಅವರಲ್ಲಿ ಒಬ್ಬರಾದರೂ ಜೀವಿಸದೆ ಅಕಾಲ ಮರಣಕ್ಕೆ ತುತ್ತಾಗುವುದು ಸಂಭವಿಸಿತು. ಆಕೆ ಎಂಟನೇ ಸಾರಿ ಗರ್ಭವತಿಯಾದಕೂಡಲೇ, ಪಂಡಿತ ಭಟ್ಟನ ಭಾರ್ಯೆಯಂತೆ ಆಕೆ ಸಹ ಚಿಂತಾಮಗ್ನಳಾದಳು. ಆಕೆ ಅಳುತ್ತಿರುವುದನ್ನು ಕೇಳಿದ ಒಬ್ಬಾನೊಬ್ಬ ಸನ್ಯಾಸಿ ಬಂದು "ತಾಯಿ, ವಿಶ್ವೇಶ್ವರನನ್ನು ಆರಾಧಿಸು. ಆ ಭಗವಂತನು ನಿನ್ನನ್ನು ಶೋಕದಿಂದ ಪಾರುಮಾಡುವನು" ಎಂದು ಹೇಳಿದನು.

"ಮಹಮ್ಮದೀಯರಾದ ನಾವು ಹಿಂದೂಗಳ ದೇವರನ್ನು ಪೂಜಿಸುವುದೆಂದರೇನು" ಎಂದು ಆಕೆ ಇನಿತಾದರೂ ತಾತ್ಸಾರಮಾಡದೆ ಸನ್ಯಾಸಿಹೇಳಿದ ಪ್ರಕಾರ ಕಾಶಿ ವಿಶ್ವೇಶ್ವರನನ್ನು ಪ್ರಾರ್ಥಿಸಿದಳು. ವಿಶ್ವೇಶ್ವರನು ಆಕೆಯ



ಪ್ರಾರ್ಥನೆ ಕೇಳಿದ. ಆಕೆಗೆ ಸ್ಫುರದ್ರೂಪಿ ಸುಂದರಿ ಹುಟ್ಟಿದಳು. ಆ ಬಾಲೆಗೆ ಲವಂಗಿ ಎಂದು ಹೆಸರಿಟ್ಟರು.

ವಿಶ್ವೇಶ್ವರನಮೇಲೆ ಭಕ್ತಿ ಅಮಿತವಾದಂತೆ ಆಕೆ ಹಿಂದೂ ಪಂಡಿತರನ್ನು ಬರಮಾಡಿಕೊಂಡು, ಸಂಸ್ಕೃತ ಗ್ರಂಥಗಳಲ್ಲಿರುವ ಶಿವ ಮಹಾತ್ಮೆಯನ್ನು ಓದಿಸಿ ಕೇಳುತ್ತಿದ್ದಳು. ಲವಂಗಿಬೆಳೆದು ದೊಡ್ಡವಳಾದಮೇಲೆ ಆಕೆಗೆ ಆ ಪಂಡಿತರಿಂದ ವಿದ್ಯಾಭ್ಯಾಸ ಕಲಿಸಿದಳು ಆಕೆಯ ತಾಯಿ. ಲವಂಗಿ ಸೂಕ್ಷ್ಮಗ್ರಾಹಿಯಾದುದರಿಂದ ಕೆಲವೇ ದಿನಗಳಲ್ಲಿ ವೇದಶಾಸ್ತ್ರಗಳಲ್ಲೂ, ಸಂಸ್ಕೃತ ಭಾಷೆಯಲ್ಲಿಯೂ ಪಾಂಡಿತ್ಯಪಡೆದಳು. ಹದಿನೆಂಟು ವರ್ಷ ವಯಸ್ಸು ಆಗುವ ವೇಳೆಗೆ ಆಕೆಗೆ ವಿಶ್ವೇಶ್ವರ ಸ್ವಾಮಿಯನ್ನು ಸಂದರ್ಶಿಸಬೇಕೆಂಬ ಹಂಬಲ ಉಂಟಾಯಿತು.

"ಹಿಂದೂಗಳ ದೇವಾಲಯಕ್ಕೆ ನಾವು ಹೋಗುವುದೆಂದರೇನು. ನಮಗೆ 'ಅಲ್ಲಾ' ಇರುವಾಗ ಬೇರೊಬ್ಬರ ದೇವರನ್ನು ನಾವು ಪೂಜಿಸುವೆವೆಂದರೆ, ಅದು ಆಕ್ಷೇಪಣೆಯಲ್ಲವೇ" ಎಂದನು ಬಾದಶಹ.

ಅದಕ್ಕೆ ಲವಂಗಿ "ಅಬ್ಬಾಜಾನ್, ನಮ್ಮ ದೇವರೇನು! ಅವರ ದೇವರೇನು! ದೇವರೊಬ್ಬನೇ! ನಾವು ಅಲ್ಲಾ ಅನ್ನುತ್ತೇವೆ. ಅವರು ಈಶ್ವರ ಎಂದು ಹೇಳುತ್ತಾರೆ. ಹೆಸರಿನಲ್ಲಿ ಭೇದವೇ ಹೊರತು ಮತ್ತೇನಿಲ್ಲ. ಆದ್ದರಿಂದ ನನ್ನನ್ನು ಹೋಗಲುಬಿಡಿ. ದೇವರ





ದರ್ಶನ ಪಡೆಯಲು ಅನುಮತಿಕೊಡಿ" ಎಂದಳು.

ಆ ಮಾತು ಬಾದಶಹನಿಗೆ ಸರಿಕಾಣದಿದ್ದರೂ, ಒಬ್ಬಳೇ ಮಗಳೆಂಬ ಮಮತೆಯಿಂದ ಮರು ಮಾತನಾಡದೆ ಒಪ್ಪಿಕೊಂಡನು.

ಬಾದಶಹನೇನೋ ಒಪ್ಪಿಕೊಂಡ. ಆದರೆ ಅಲ್ಲಿಯ ಹಿಂದೂಗಳು ಒಪ್ಪಲಿಲ್ಲ. ಗುಡಿಯೊಳಗೆ ತುರುಕರ ಹುಡುಗಿ ಬರುವುದೆಂದರೇನು? ವಿಶ್ವೇಶ್ವರನಿಗೆ ಮೈಲಿಗೆ ಆಗುವುದಿಲ್ಲವೇ? ಎಂಬ ಗಲಭೆ ಉಂಟಾಯಿತು. ಈ ವಿಷಯ ಬಾದಶಹನಿಗೆ ತಿಳಿದು ಆತ ಉರಿದು ಬಿದ್ದ. "ನನ್ನ ಮಗಳು ದೇವಸ್ಥಾನಕ್ಕೆ ಬರುವೆನೆಂದು ಹೇಳಿದ್ದೇ ಹೆಚ್ಚು. ನೀವು ಅಡ್ಡಿಮಾಡುವಿರಾ? ಯಾರು ಅಡ್ಡಿ ಮಾಡುವರೋ ಮಾಡಿ. ಅವರ ಸೊಂಟ ಮುರಿಸುತ್ತೇನೆ" ಎಂದು ಹೇಳಿ, ಒಂದು ದೊಡ್ಡ ಸೇನೆಯನ್ನು ಸಹಾಯಕ್ಕೆ ಕೊಟ್ಟು ಲವಂಗಿಯನ್ನು ಗುಡಿಗೆ ಕಳುಹಿಸಿದ.

ಈ ಸುದ್ದಿ ಗೋದಾವರಿ ಪ್ರಾಂತದಲ್ಲಿದ್ದ ಜಗನ್ನಾಥನಿಗೆ ತಿಳಿಯಿತು. ಆಗ ಆತನಿಗೆ ಇಪ್ಪತ್ತೈದು ವರ್ಷ ವಯಸ್ಸು; ಒಳ್ಳೇ ದೇಹದಾರ್ಢ್ಯ, ಪೌರುಷಉಕ್ಕಿ ಬರುವ ವಯಸ್ಸು. ಆತನಿಗೆ ಬಾದಶಹನ ಪ್ರತಿಜ್ಞೆ ತಿಳಿದಕೂಡಲೇ "ಏನು? ಪ್ರತಿಭಟಿಸಲು ಗಂಡಸರೇ ಇಲ್ಲವೇ ಹಿಂದೂಗಳಲ್ಲಿ? ಬಾದಶಹನ ಮಗಳು ಹೇಗೆ ದೇವಾಲಯ ಪ್ರವೇಶಿಸುವಳೋ ನೋಡು



ತ್ತೇನೆ" ಎಂದು ಪ್ರತಿಜ್ಞೆಮಾಡಿ, ಕಾಶಿಗೆ ಹೊರಟನು. ಆತನ ಹಿಂದೆ ಅಗಾಧ ಸೈನ್ಯ ಹೊರಟು, ಬಾದಶಹನ ಸೇನೆ ಎದುರಿಸಲು ನಿಂತಿತು.

"ಬಾದಶಹನ ಸೇನೆ ಜಗಳಕ್ಕೆ ಎಳೆದರೆ ಎದುರು ಬೀಳಿ. ನಾನು ಆಲಯದ ಹೊಸಲಿನ ಹತ್ತಿರ ಸ್ವಾಮಿಗೆ ಕಾವಲು ಇರುತ್ತೇನೆ" ಎಂದು ಹೇಳಿ ದ್ವಾರಪಾಲನಂತೆ ಜಗನ್ನಾಥನು ಗರ್ಭಾಲಯದ ಬಾಗಿಲಲ್ಲಿ ಕತ್ತಿ ಹಿಡಿದು ನಿಂತುಕೊಂಡನು.

ಲವಂಗಿ ತನ್ನ ಸಂಗಡ ಬಂದ ಯವನ ಸೇನೆಯನ್ನೂ ಎದುರಾಗಿ ಹಿಂದೂಸೇನೆ ನಿಂತಿರುವುದನ್ನೂ ನೋಡಿ "ನನ್ನ ಮೂಲಕ ಇವರೆಲ್ಲರೂ ಯುದ್ಧಮಾಡಿ ಒಬ್ಬರನ್ನೊಬ್ಬರು ಕೊಂದು ಅನ್ಯಾಯವಾಗಿ ಸಾಯುವರು.



ಮಾತನಾಡದೆ ದೆಹಲಿಗೆ ಹಿಂತಿರುಗಿಬಿಟ್ಟರೆ ಯಾವಘಟನೆಯೂ ಇರುವುದಿಲ್ಲ" ಅಂದು ಕೊಂಡಳು. ಆದರೆ ಇಷ್ಟುದೂರ ಬಂದು ವಿಶ್ವೇಶ್ವರನನ್ನು ನೋಡದೆ ಹಿಂತಿರುಗುವುದು ಆಕೆಯ ಮನಸ್ಸಿಗೆ ಸರಿಬೀಳಲಿಲ್ಲ. ರಕ್ತ ಪಾತವಿಲ್ಲದೆ ಕಾರ್ಯವನ್ನು ನೆರವೇರಿಸುವ ಬಗೆ ಹೇಗೆ ಎಂದು ಯೋಚಿಸಿದಳು.

ಆಕೆ ಕೂಡಲೇ ಒಂದು ಮಕಮಲ್ ಪಾಯಿಜಾಮು, ಕೋಟು, ರುಮಾಲು ತರಿಸಿ, ಒಬ್ಬ ರಾಜಪುತ್ರನಂತೆ ವೇಷ ಧರಿಸಿ, ಯಾರಿಗೂ ಅನುಮಾನ ಬರದಂತೆ ವಿಶ್ವೇಶ್ವರನ ದೇವಾಲಯವನ್ನು ಪ್ರವೇಶಿಸಿದಳು.

ದೇವರ ದರ್ಶನಾರ್ಥವಾಗಿ ಬಂದ ರಾಜ ಕುಮಾರನು ಯಾರೇ ಆಗಲೀ ಈ ರೀತಿ ಕೋಟು ರುಮಾಲುಗಳನ್ನು ಧರಿಸಿಕೊಂಡು ಬರುವುದಿಲ್ಲ. ದ್ವಾರದ ಹತ್ತಿರ ಕಾವಲು ಕಾದಿದ್ದ ಜಗನ್ನಾಥನು "ಯಾರಯ್ಯ ನೀನು? ಕೋಟು ರುಮಾಲುಗಳನ್ನು ತೆಗೆಯದೆ ಬರುತ್ತಿರುವೆ ಗುಡಿಯೊಳಕ್ಕೆ? ನಿಲ್ಲು, ನಿಲ್ಲು" ಎಂದು ಆಕೆಯ ಕೈ ಹಿಡಿದುಕೊಂಡನು.

ಪುರುಷವೇಷ ಧರಿಸಿದ್ದರೂ ತನ್ನ ಕೈಯನ್ನು ಪರಪುರುಷನು ಹಿಡಿದುದರಿಂದ ನಾಚಿ, ಲವಂಗಿ ಸ್ವಲ್ಪ ಹಿಂದೆ ಸರಿದಳು. ಜಗನ್ನಾಥನಿಗೆ ಆ ವೈಖರಿ ಕಂಡು ತುಸ ಅನುಮಾನ ವುಂಟಾಯಿತು.

ಆದರೆ ಇಷ್ಟರಲ್ಲಿ ಲವಂಗಿ ಚೇತರಿಸಿಕೊಂಡು "ಅಯ್ಯಾ ನಾನು ಕೋಟು ಧರಿಸಿರುವುದಕ್ಕೆ ಆಕ್ಷೇಪಣೆ ಮಾಡುತ್ತಿರುವಿರಿ. ನೀವು ನೋಡಿದರೆ ಬ್ರಾಹ್ಮಣರಂತೆ ಕಾಣುವಿರಿ. ಬ್ರಾಹ್ಮಣರು ಎಲ್ಲಿಯಾದರೂ ದ್ವಾರ ಪಾಲಕರಾಗಿ ಸೇವಾ ವೃತ್ತಿಗೆ ಇಳಿಯುವರೇ?" ಎಂದಳು.

"ನಾನು ಸೇವಕನಲ್ಲ.. ವೀರಯೋಧ. ಲವಂಗಿ ಎಂಬ ಮ್ಲೇಚ್ಛ ಕನ್ಯೆಯೊಬ್ಬಳು ಬಲವಂತವಾಗಿ ಆಲಯ ಪ್ರವೇಶಿಸುವಳೆಂದು ತಿಳಿದು, ಕತ್ತಿ ಹಿರಿದು ಕಾವಲು ಕಾಯುತ್ತಿರುವೆನು" ಎಂದನು ಜಗನ್ನಾಥ.

"ಮೃದು ಹೃದಯದಿಂದಿರಬೇಕಾದ ವಿಪ್ರರ ಕೈಯಲ್ಲಿ ಕತ್ತಿ ಎಂದರೇನು?" ಎಂದು ಪ್ರಶ್ನೆ ಹಾಕಿದಳು ಮತ್ತೆ. "ಬ್ರಾಹ್ಮಣನೆಂದ ಮಾತ್ರಕ್ಕೆ ಆಯುಧಗಳನ್ನು ಹಿಡಿಯಕೂಡದೆ? ಪರಶುರಾಮ ಮುಂತಾದವರು ಹಿಡಿಯ

ಲಿಲ್ಲವೇ? ಆದರೂ, ವಾದವಿವಾದಗಳು, ಶಾಸ್ತ್ರವನ್ನು ಕುರಿತು ಚರ್ಚೆ ಸಾವಕಾಶ ವಾಗಿ ಮಾಡೋಣ. ಯಾತ್ರಾರ್ಥಿಗಳು ಬರುತ್ತಿರುವರು. ನೀವು ಹೋಗಿರಿ" ಎಂದ ಜಗನ್ನಾಥ.

"ಹೇಗೂ ಬಂದಿದ್ದೇನೆ. ವಿಶ್ವೇಶ್ವರನನ್ನು ಪ್ರಾರ್ಥಿಸಿ ಹೋಗೋಣ" ಎಂದು ಲವಂಗಿ ದೇವರಮೇಲೆ ತನ್ನ ದೃಷ್ಟಿನಿಲ್ಲಿಸಿ, ಭಕ್ತಿಪಾರ ವಶ್ಯದಿಂದ ಆಶುಕವಿತ್ವದಲ್ಲಿ ನಾಲ್ಕು ಶ್ಲೋಕ ಗಳನ್ನು ಹಾಡಿದಳು. ಪ್ರತಿ ಶ್ಲೋಕದ ಕೊನೆ ಯಲ್ಲಿ 'ಭವಾಬ್ಧಿಜಲೇ ಪತೀತಾಂ ಅವ ಮಾಂ ಕೃಪಯಾ....' ಎಂದು ಪ್ರಾರ್ಥನೆ ಮಾಡಿದಳು.

'ಹುಟ್ಟು ಎಂಬ ಸಮುದ್ರದಲ್ಲಿ ಬಿದ್ದವಳು. ನನ್ನನ್ನು ಕರುಣೆಯಿಂದ ಕಾಪಾಡು' ಎಂದು ಈ ವಾಕ್ಯದ ಅರ್ಥ. ಪುರುಷನಾದರೆ ಬಿದ್ದಿರು ವಾತ ಎಂದು ಹೇಳುವನೇ ಹೊರತು ಬಿದ್ದ ವಳು ಎಂದು ಹೇಳುವನೆ? ಯಾರೋ ಯುವತಿ ಪುರುಷವೋಷಾಕಿನಲ್ಲಿ ಬಂದಿರ ಬೇಕು' ಎಂದು ಕಂಡು ಹಿಡಿದ ಜಗನ್ನಾಥ. ಖಡಾಖಂಡಿತವಾಗಿ ಕೇಳಿಯೂಬಿಟ್ಟ.

ಲವಂಗಿ ಗಡುಸು ಹುಡುಗಿಯಾದುದರಿಂದ "ಅಯ್ಯಾ ಈ ಶ್ಲೋಕಗಳು ನಾನು ರಚಿಸಿದು ದಲ್ಲ. ಯಾರೋ ಸ್ತ್ರೀ ಬರೆದಿದ್ದಾಳೆ. ನಾನು ಅದನ್ನು ಹಾಡಿದೆ" ಎಂದು ಹೇಳಿ ಇನ್ನು ತಾನು ಅಲ್ಲಿದ್ದರೆ ಗುಟ್ಟು ಬಯಲಾಗುವು ದೆಂದು ಸರಸರನೆ ಹಿಂದಕ್ಕೆ ನಡೆದುಬಿಟ್ಟಳು.




ಆಕಳಿಸಿದರೆ ಪಕ್ಕೆಲುಬು ಲೆಕ್ಕಮಾಡುವ ಸೂಕ್ಷ್ಮತೆಯುಳ್ಳ ಜಗನ್ನಾಥಪಂಡಿತನಿಗೆ, ಬಂದು ಹೋದವಳು ಲವಂಗಿಯೇ ಇರಬೇ ಕೆಂದು ತಿಳಿದು ಹೋಯಿತು. ಆಕೆಯ ಸೌಂದರ್ಯ, ವಾಗ್ಜಾಲ, ಪಾಂಡಿತ್ಯಮತ್ತು ಕವಿತಾ ಮಾಧುರ್ಯಗಳೆಲ್ಲವನ್ನೂ ನೆನೆಸಿ ಕೊಳ್ಳುತ್ತಾ, ತಾನು ಕಾಶಿಗೆ ಬಂದ ಕಾರ್ಯ ವನ್ನು ಮರೆತುಬಿಟ್ಟನು. 'ಲವಂಗಿ ಆಲಯ ದೊಳಗೆ ಪ್ರವೇಶಿಸ ಕೂಡದೆಂಬ' ಜಗನ್ನಾಥ ನಿಗೆ 'ಲವಂಗಿಯನ್ನು ವಿವಾಹವಾಗ ಬೇಕು' ಎಂಬ ಬಯಕೆಯುಂಟಾಯಿತು.

ತನ್ನ ಬಿಡಾರವನ್ನು ಸೇರಿದ ಲವಂಗಿಗೂ ಸಹ ಜಗನ್ನಾಥನಮೇಲೆ ಅಮಿತ ಅಭಿಲಾಷೆ ಯುಂಟಾಯಿತು. ಬಾದಶಹ ಇದು ತಿಳಿದು ಆಕೆಗೆ ಅಡ್ಡಿಹೇಳಲು "ಅಬ್ಬಾಜಾ, ದೇವರ

ಸನ್ನಿಧಿಯಲ್ಲಿ ಆತನಿಗೂ ನನಗೂ ಮಾನಸಿಕ ಮದುವೆ ನಡೆದುಹೋಯಿತು. ಈಗ ನೀವು ಬೇಡವೆಂದರೇನು ಲಾಭ" ಎಂದಳು.

ಇನ್ನು ಹೇಳುವುದಾದರೂ ಏನಿದೆ? ಒಬ್ಬರ ತಲೆ ಒಬ್ಬರು ತೆಗೆಯೋಣವೆಂದು ಬಂದಿದ್ದ ಎರಡು ಸೇನೆಗಳೂ, ಗಂಡಿನ ಮತ್ತು ಹೆಣ್ಣಿನ ಕಡೆಯವರಾಗಿ ಬದಲಾಯಿಸಿದರು. ಸತ್ಕಾರ ಕೂಟಗಳು ನಡೆದವು.

ಈ ಮದುವೆಯಿಂದ ಒಂದು ಹೊಸ ಸಿದ್ಧಾಂತ ಏರ್ಪಟ್ಟಿತು. "ಅಲ್ಲಾ ಎಂದರೂ ವಿಶ್ವೇಶ್ವರನೆಂದರೂ ಒಬ್ಬನೇ. ಹಿಂದೂಗಳೂ, ಮಹಮ್ಮದೀಯರೂ ಆ ದೇವರಿಗೆ ಸಮಾನವೇ. ಆದ್ದರಿಂದ ಕಲಹಗಳಿಲ್ಲದೆ ಎರಡು ಮತಸ್ಥರು ಅಂತರ್ವಿವಾಹವಾಗುವುದು ಒಳಿತು" ಎಂದು. ಆದರೇನು? ಮಹಾ ಪಂಡಿತರಾದ ಲವಂಗಿ, ಜಗನ್ನಾಥರಿಗೆ ಈ ಸಿದ್ಧಾಂತ ಅರ್ಥವಾಯಿತೇ ಹೊರತು, ಸಾಮಾನ್ಯರಿಗೆ ಸರಿಗಾಣಲಿಲ್ಲ. ಸರಿಕಾಣುವುದು ಹಾಗಿರಲಿ, ಮಹಾಕವಿ, ಪಂಡಿತನೂ ಆಗಿ 'ಪಂಡಿತರಾಯ' ನೆಂಬ ಬಿರುದು ಪಡೆದ ಜಗನ್ನಾಥನೆಂದರೆ ಸಹಿಸದವರೆಲ್ಲರೂಸೇರಿ 'ತುರುಕರ ಹುಡುಗಿಯನ್ನು ಮದುವೆಯಾದೆ. ಕುಲಭ್ರಷ್ಟ, ಮತಭ್ರಷ್ಟ, ಅಪವಿತ್ರನಾದೆ" ಎಂದು ಹೇಳಿ ಆತನಿಗೆ ಬಹಿಷ್ಕಾರ ಹಾಕಿದರು.

ಜಗನ್ನಾಥ ಆ ಮಾತುಗಳನ್ನು ಕೇಳಿ ಫಕ್ಕನೆ ನಕ್ಕು "ಎಲೈ ಹುಚ್ಚರೆ, ನಾನೆಷ್ಟು ಮಾತ್ರಕ್ಕೂ ಅಪವಿತ್ರನಲ್ಲ. ಇದೋ ನೋಡಿ! ಎಂದು ಅವರೆಲ್ಲರನ್ನೂ ಸಂಗಡ ಕರೆದುಕೊಂಡು ಗಂಗಾ ನದಿದಡಕ್ಕೆ ಹೋಗಿನಿಂತು, ಆ ಮಹಾ ದೇವಿಯನ್ನು ಕುರಿತು ಸ್ತೋತ್ರ ಮಾಡುತ್ತಾ ಶ್ಲೋಕಹೇಳಲು ಪ್ರಾರಂಭಿಸಿದನು.

ಆ ಸ್ನಾನ ಘಟ್ಟದಲ್ಲಿ ನೂರು ಮೆಟ್ಟಲುಗಳಿವೆ. ಗಂಗಾದೇವಿ ಆ ಮಹಾ ಭಕ್ತನ ಸ್ತೋತ್ರವನ್ನು ಕೇಳಿ, ಒಂದೊಂದು ಶ್ಲೋಕಕ್ಕೆ ಒಂದೊಂದು ಮೆಟ್ಟಲಿನಂತೆ ಏರಿ, ನೂರು ಶ್ಲೋಕಗಳು ಪೂರ್ತಿಯಾಗುವ ಸಮಯಕ್ಕೆ ಲವಂಗಿ ಮತ್ತು ಜಗನ್ನಾಥರನ್ನು ತನ್ನ ಒಡಲಿನಲ್ಲಿ ಸೇರಿಸಿಕೊಂಡಳು. 'ನಿಮ್ಮನ್ನು ಅಪವಿತ್ರರೆಂದವರೇ ಅಪವಿತ್ರರು. ಆ ಅಪವಿತ್ರರ ನಡುವೆ ನೀವಿರುವುದು ಬೇಡ' ಎಂದು ಹೇಳುವ ರೀತಿಯಲ್ಲಿ ಆ ಪುಣ್ಯದಂಪತಿಗಳನ್ನು ತನ್ನಲ್ಲಿ ಐಕ್ಯಮಾಡಿಕೊಂಡಳು.





# ಮೋಸದ ಪೆಟ್ಟಿಗೆ

ಹಿಂದೆ ಪಾಟಲೀಪುತ್ರವನ್ನು ಚಂದ್ರಗುಪ್ತನೆಂಬ ರಾಜನು ಪಾಲಿಸುತ್ತಿದ್ದನು. ಆತನು ವಿಶಾಲವಾದ ಆ ರಾಜ್ಯವನ್ನು ಕೆಲವು ರಾಷ್ಟ್ರಗಳನ್ನಾಗಿ ವಿಭಾಗಿಸಿ, ಒಂದೊಂದು ರಾಷ್ಟ್ರಕ್ಕೂ ಒಬ್ಬೊಬ್ಬ ಅಧಿಕಾರಿಯನ್ನು ನೇಮಿಸಿದನು.

ಆತನು ನೇಮಿಸಿದ ಅಧಿಕಾರಿಗಳೆಲ್ಲರೂ ರಾಜಾಜ್ಞೆಗಳನ್ನು ಸರಿಯಾಗಿಯೇ ಪಾಲಿಸುತ್ತಿದ್ದರು. ಅಂತಹ ಅಧಿಕಾರಿಗಳು ಇದ್ದುದರಿಂದ ರಾಜನಿಗೆ ಕೀರ್ತಿ ಬಂತು. ಆದರೆ ವಿದರ್ಭ ರಾಷ್ಟ್ರವನ್ನು ಪಾಲಿಸುತ್ತಿದ್ದ ಅಧಿಕಾರಿ ಮಾತ್ರ ಲಂಚಕೋರನೆಂತಲೂ, ದುಷ್ಟನೆಂತಲೂ ಅಪಕೀರ್ತಿ ಹರಡಿತು. ಆದುದರಿಂದ ಅವನನ್ನು ಅಧಿಕಾರದಿಂದ ತೆಗೆದು ಹಾಕಿ, ಆ ಸ್ಥಾನದಲ್ಲಿ ಸನ್ಮಾರ್ಗನೂ ಧರ್ಮಿಷ್ಠನೂ ಆದವನೊಬ್ಬನನ್ನು ನೇಮಿಸಬೇಕೆಂದು ರಾಜ ನಿರ್ಧರಿಸಿದನು.

ಇಷ್ಟರಲ್ಲಿ ಕೆಲ ಹಿರಿಯರು ರಾಜನ ಹತ್ತಿರ ಬಂದು "ಮಹಾ ಪ್ರಭೂ, ಇಲ್ಲಿಗೆ ಹತ್ತು ಹರಿದಾರಿ ದೂರದಲ್ಲಿ ಒಂದು ಕಾಡಿದೆ. ಆ ಕಾಡಿನಲ್ಲಿ ದನ ಮೇಯಿಸುವ ಗೊಲ್ಲನೊಬ್ಬನಿದ್ದಾನೆ. ಅವನ ಹೆಸರು ಧರ್ಮಪ್ಪ. ತುಂಬಾ ಚತುರ. ಎಂತಹ ಬಿಕ್ಕಟ್ಟು ಬಂದರೂ ಶಾಸ್ತ್ರ ಸಮ್ಮತವಾದ ತೀರ್ಪು ಕೊಡುವನು. ಆದುದರಿಂದ ಈ ನಡುವೆ ಜನರೆಲ್ಲಾ ನ್ಯಾಯಕ್ಕಾಗಿ ನ್ಯಾಯಾಲಯಕ್ಕೆ ಹೋಗುವುದನ್ನು ನಿಲ್ಲಿಸಿ, ಕಾಡಿನಲ್ಲಿರುವ ಧರ್ಮಪ್ಪನ ಹತ್ತಿರ ಹೋಗುತ್ತಿರುವರು" ಎಂದು ಬಿನ್ನೈಸಿದರು.

ಈ ಮಾತುಗಳನ್ನು ಕೇಳಿ ರಾಜನಿಗೆ ಆಶ್ಚರ್ಯವಾಯಿತು. "ಏನಿದು ಹುಚ್ಚು. ಗೊಲ್ಲರವನೆಂದರೇನು? ಅವನಮೇಲೆ ಜನರಿಗೆ ಇಷ್ಟೊಂದು ವಿಶ್ವಾಸವಿರುವುದೆಂದರೇನು? ಅವನು ಯಾರೋ ಪ್ರಚಂಡನಿರಬೇಕು" ಎಂದು ಭಾವಿಸಿದ. ಎಲ್ಲೋ ಕಾಡಿನಲ್ಲಿ ದನ ಮೇಯಿಸುತ್ತಿದ್ದ ಆ ಧರ್ಮಪ್ಪನನ್ನು ತನ್ನ ಆಸ್ಥಾನಕ್ಕೆ ಬರಮಾಡಿಕೊಂಡು, ಬೆಲೆ ಬಾಳುವ ವಸ್ತ್ರಗಳನ್ನು ಕೊಡಿಸಿ, ಆತನನ್ನು ಉಚಿತಾಸನದಲ್ಲಿ ಕುಳ್ಳಿರಿಸಿ, "ಎಲೈ, ಧರ್ಮಪ್ಪ, ನಿನ್ನನ್ನು ಕುರಿತು, ನಿನ್ನ ಧರ್ಮಗುಣಗಳನ್ನು

ಎಲ್. ಚಂದ್ರಮೌಳಿ, ಚಾಮರಾಜನಗರ



ಕುರಿತು, ನ್ಯಾಯ ಸಮ್ಮತವಾದ ತೀರ್ಪು ಗಳನ್ನು ಕುರಿತು ನಾವು ತುಂಬಾ ಕೇಳಿರುವೆವು. ಕೇಳಿ ಸಂತೋಷಗೊಂಡು, ನಿನ್ನನ್ನು ವಿದರ್ಭ ರಾಷ್ಟ್ರಕ್ಕೆ ಅಧಿಕಾರಿಯಾಗಿ ನೇಮಿಸಿರುತ್ತೇವೆ" ಎಂದು ಹೇಳಿದ ರಾಜ.

"ಪ್ರಭೂ ನನ್ನಮೇಲೆ ಅಭಿಮಾನ ತೋರಿಸಿದಿರಿ. ಆದರೆ ನನಗಷ್ಟು ಚೈತನ್ಯವೆಲ್ಲಿದೆ. ತಿಳುವಳಿಕೆ ಎಲ್ಲಿದೆ? ಅಷ್ಟೇ ಅಲ್ಲ. ನನ್ನಂತಹವನು ಅಧಿಕಾರಿ ಎಂದರೆ ಪ್ರಪಂಚದಲ್ಲಿ ನಗುಪಾಟಲಾಗುತ್ತದೆ...." ಎಂದು ಮತ್ತೆ ಏನೋ ಹೇಳಲು ಹೋದನು. ಆದರೆ ರಾಜನ ಆಜ್ಞೆಯನ್ನು ಮೀರಲು ಯಾರಿಗಾದರೂ ಅವಕಾಶವಿದೆಯೆ? ಆದುದರಿಂದ ಮರು ಮಾತನಾಡದೆ ರಾಜಾಜ್ಞೆಯನ್ನು ಶಿರಸಾವಹಿಸಿ, ಪದವಿಯನ್ನು ಸ್ವೀಕರಿಸಿದ ಧರ್ಮಪ್ಪ.

ಈ ಪದವಿ ಬಂದ ನಂತರವೂ ಸಹ ಧರ್ಮಪ್ಪನ ತೀರ್ಪುಗಳನ್ನು ಕುರಿತು ಜನ ಕೊಂಡಾಡುತ್ತಲೇ ಇದ್ದರು. ಹೀಗೆ ಕೆಲ ದಿನಗಳಾದನಂತರ ಕೆಲವರು ರಾಜನ ಹತ್ತಿರ ಹೋಗಿ "ಪ್ರಭೂ, ಧರ್ಮಪ್ಪ ಹಿಂದಿನ ಧರ್ಮಪ್ಪನಲ್ಲ. ಆತನ ಬುದ್ಧಿ ಆಗಲೇ ಬದಲಾಯಿಸಿದೆ. ಲಂಚ ಹೊಡೆಯಲು ಕಲಿತಿದ್ದಾನೆ" ಎಂದು ಫಿರ್ಯಾದು ಮಾಡಲು ಪ್ರಾರಂಭಿಸಿದರು.

ಈ ಫಿರ್ಯಾದುಗಳನ್ನು ಕೇಳಿದ ಕೂಡಲೇ ರಾಜನು ಅವಸರಪಡದೆ "ಅಧಿಕಾರವೆಂದ ಕೂಡಲೇ ಎಲ್ಲರಿಗೂ ಆಸೆ. ಸರಿಬೀಳದವರು ಸಾಮಾನ್ಯವಾಗಿ ಇಂತಹ ವದಂತಿಗಳನ್ನೂ, ಚಾಡಿಗಳನ್ನೂ ಹುಟ್ಟಿಸುವರು. ಆದುದರಿಂದ ಕಣ್ಣಾರ ಕಂಡರೆಹೊರತು ಯಾರ ಮಾತನ್ನೂ ನಂಬುವಂತಿಲ್ಲ" ಎಂದನು.

"ಅಯ್ಯೋ, ಮಹಾಸ್ವಾಮಿ. ಇವೆಲ್ಲವೂ ಸುಳ್ಳು ವದಂತಿಗಳೆಂದು ತಾವು ಎಣಿಸುವಿರೇನು? ವಿಚಾರಣೆ ನಡೆಸಲು ಧರ್ಮಪ್ಪ ಆನೆಯಮೇಲೆ ಹೋಗುತ್ತಾನೆ. ಆತನ ಹಿಂದೆ ಕುದುರೆಗಳಮೇಲೆ ಸವಾರಿ ಮಾಡುತ್ತಾ ಅಂಗರಕ್ಷಕರಿರುತ್ತಾರೆ. ಅದೇನೋ ಸರಿ. ತನ್ನ ಅಂತಸ್ತನ್ನು ಉಳಿಸಿಕೊಳ್ಳಲು ಮಾಡುವನೆಂದು ಭಾವಿಸೋಣ. ಆದರೆ ಇಬ್ಬರು ನೌಕರರು ಒಂದು ಭಾರಿ ಮರದ ಪೆಟ್ಟಿಗೆಯನ್ನು ಹೊತ್ತು ಸಂಗಡ ಹೋಗವರಲ್ಲಾ. ಅದೇಕೆ ಎಂದು ಸ್ವಾಮಿಯವರು ಎಂದಾದರೂ ಪರೀಕ್ಷೆ ಮಾಡಿರುವಿರಾ?" ಎಂದು

ಮತ್ತೆ ಪ್ರಶ್ನೆಮಾಡಿದರು, ರಾಜನ ಮನಸ್ಸಿಗೆ ನಾಟುವಂತೆ.

ಈ ವಿಷಯವೇನೋ ನೋಡಿಯೇ ತಿಳಿಯುವ ಎಂದು ಕುತೂಹಲದಿಂದ ರಾಜನು ವಿದರ್ಭ ದೇಶಕ್ಕೆ ಸ್ವತಃ ಹೊರಟನು. ಅವರು ಅರ್ಧ ದಾರಿಯಲ್ಲಿರುವಾಗಲೇ ಎಲ್ಲಿಗೋ ವಿಚಾರಣೆಗಾಗಿ ಹೋಗುತ್ತಿದ್ದ ಧರ್ಮಪ್ಪ, ಆತನ ಪರಿವಾರ ಕಾಣಿಸಿತು.




ಧರ್ಮಪ್ಪನ ಸಂಗಡ ನೌಕರರು ಹೊತ್ತುಕೊಂಡುಹೋಗುತ್ತಿದ್ದ ಮರದ ಪೆಟ್ಟಿಗೆ ಕಂಡ ಕೂಡಲೇ ತಾನು ಕೇಳಿದ ಮಾತುಗಳು ನಿಜವೆಂತಲೂ, ಲಂಚ ಪಡೆದ ಹಣ ಶೇಖರಿಸಲು ಈ ಪೆಟ್ಟಿಗೆಯಿರುವುದೆಂತಲೂ ರಾಜನಿಗೆ ದೃಢವಾದ ಅಭಿಪ್ರಾಯವುಂಟಾಯಿತು. ರಾಜನು ಧರ್ಮಪ್ಪನನ್ನು ಮಾತನಾಡಿಸಿ, ಆ ಮಾತು ಈ ಮಾತು ಆಡುತ್ತಾ "ಏನು ಧರ್ಮಪ್ಪಾ. ನೀನು ಹೊರಿಸಿಕೊಂಡು ಹೋಗುತ್ತಿರುವ ಕಾಗದ ಪತ್ರಗಳು ಬಹು ಭಾರವಾಗಿರುವಂತೆ ಕಾಣಿಸುವುದಲ್ಲಾ. ಎಲ್ಲಿ ಎಲ್ಲಿ ನೋಡೋಣ" ಎಂದು ತಮಾಷೆಯಾಗಿ ಹೇಳಿ, ಆತುರದಿಂದ ಆ ಮರದ ಪೆಟ್ಟಿಗೆಯ ಮುಚ್ಚಳ ತೆಗೆಸಿ ನೋಡಿದ.

ನೋಡಿದರೆ ಏನಿದೆ ಅದರಲ್ಲಿ? ಧರ್ಮಪ್ಪ ಈ ಅಧಿಕಾರಕ್ಕೆ ಬರುವ ಮೊದಲು ಹಾಕಿಕೊಳ್ಳುತ್ತಿದ್ದ ಹರಿದ ಅರಿವೆಗಳು ಹೊರತು ಒಂದು ಕವಡೆಯಾದರೂ ಕಾಣಿಸಲಿಲ್ಲ. ಎಲ್ಲರೂ ಆಶ್ಚರ್ಯಚಕಿತರಾದರು. ಸುಮ್ಮನಿರಲಾರದೆ ರಾಜನು ಈ ವಿಚಿತ್ರ ವರ್ತನೆಗೆ ಕಾರಣವೇನೆಂದು ಧರ್ಮಪ್ಪನನ್ನು ಕೇಳಿದ. ಆಗ ಆತನು "ಪ್ರಭೂ, ಈಗ ನನಗೊದಗಿದ ನಡುಗಾಲದ ಸಿರಿಯಿಂದ ನನ್ನ ತಲೆ ಏರದಂತೆ ಈ ಬಟ್ಟೆಗಳು ನನ್ನ ಹಿಂದಿನ ಸ್ಥಿತಿಯನ್ನ ಜ್ಞಾಪಕಕ್ಕೆ ತರುತ್ತಿರುವುವು. ನನ್ನ ಪೂರ್ವಸ್ಥಿತಿಯನ್ನು ಮರೆತೆನೆಂದರೆ ನನ್ನಲ್ಲಿ ನೀತಿ, ಧರ್ಮಗಳಿಗೆ ಸ್ಥಳವಿರುವುದಿಲ್ಲ. ಆಗ ಕೊಡುವ ತೀರ್ಪು ನ್ಯಾಯಾನುಸಾರವಿರುವುದಿಲ್ಲ. ನನ್ನ ನಿಜಸ್ಥಿತಿ ಸದಾ ಜ್ಞಾಪಕದಲ್ಲಿರಲು ಹೀಗೆ ಮಾಡುತ್ತಿರುವೆನು" ಎಂದು ಧರ್ಮಪ್ಪ ಉತ್ತರಹೇಳಿದ.

"ಶಹಬಾಷ್, ಧರ್ಮಪ್ಪ–ನಿಜವಾಗಿ ನೀನು ಧರ್ಮಾವತಾರನೇ ಸರಿ" ಎಂದು ರಾಜನು ಮೆಚ್ಚಿಕೊಂಡನು. ಯಾವಾಗಲೂ ಅಪವಾದಗಳನ್ನು ಪರಿಶೀಲಿಸಿ ನಂಬಬೇಕು.




ಉರುವಕೊಂಡ ಅಂತ ಗ್ರಾಮ. ಅಲ್ಲಿ ಉಮಾಪತಿ ಅಂತ ಒಬ್ಬ ಬ್ರಾಹ್ಮಣ. ಆತ ತುಂಬಾ ನಿಷ್ಠಾಪರ. ಸುತ್ತಮುತ್ತ ಇರುವ ಊರುಗಳಲ್ಲಿ ಯಾವ ಯಾವ ಧಾನ್ಯ ಬೆಳೆಯುವುದು, ಎಲ್ಲಿ ಎಷ್ಟು ಸರಕುಮಿಕ್ಕಿದೆ ಎಂಬ ವಿಷಯಗಳೆಲ್ಲಾ ಉಮಾಪತಿ ಆಗಾಗ ತಿಳಿದುಕೊಂಡು, ಅವುಗಳಿಗೆ ಸರಿಯಾದ ಗಿರಾಕಿ ತಂದು, ಕಮಿಷನ್ ವ್ಯಾಪಾರ ನಡೆಸುತ್ತಿದ್ದ. ಅಂದಿನಿಂದ ಯಾರಿಗೆ ಯಾವ ದಿನಸು ಬೇಕಾದರೂ ಉಮಾಪತಿಯನ್ನು ಆಶ್ರಯಿಸಿದರೆ ಸರಕನ್ನು ಸುಲಭ ಬೆಲೆಗೆ ಕ್ಷಣಮ್ರಾತದಲ್ಲಿ ಕೊಡಿಸಿಕೊಟ್ಟು, ತನ್ನ ಪಾಲಿನ ಕಮಿಷನ್ ಪಡೆಯುತ್ತಿದ್ದ. ಈರೀತಿ ಆತನ ಸಂಸಾರ ಸಾಗುತ್ತಿತ್ತು. ಶ್ರಮವಹಿಸಿ ಸಕಲ ಸೌಕರ್ಯಗಳನ್ನು ಸ್ವತಃ ಒದಗಿಸುತ್ತಿದ್ದನಾಗಿ ಉಮಾಪತಿಯ ಹೆಸರು ದೂರದೇಶಗಳಿಗೂ ಹರಡಿ ಕೆಲ ದಿನಗಳಲ್ಲೇ ಆತನಿಗೆ ವ್ಯಾಪಾರದಲ್ಲಿ ಗಿರಾಕಿಗಳು ಹೆಚ್ಚಾದರು.

ಹೀಗೇ ಇರುವಲ್ಲಿ ಒಂದು ದಿನ ಹುಸೇನನೆಂಬ ಹೊಸ ವರ್ತಕನೊಬ್ಬನು ಆತನ ಕೀರ್ತಿ ಕೇಳಿ, ಉರುವಕೊಂಡ ಗ್ರಾಮಕ್ಕೆ ಬಂದು ಉಮಾಪತಿಯನ್ನು ಆತನ ಮನೆಯಲ್ಲಿ ಸಂಧಿಸಿದ.

"ಓ, ಪಂತ್ರೀ ನಂಗೆ ಐವತ್ತೂ ಚೀಲ ಕಡ್ಲೀಬೇಳೆ ಬೇಕೈತೆ. ವ್ಯಾಪಾರ ಜಲ್ದಿ ಆಗ್ಬೇಕು. ನಿಂಗೆ ಕಮಿಷನ್ ಹೇನು ಕೊಡಬೇಕೋ ಕೊಡ್ತೀನಿ" ಎಂದ.

ಅದಕ್ಕೆ ಉಮಾಪತಿ "ಸರಿ, ಹೋಗೋಣ ಹುಸೇನ್ ಸಾಬ್ರೆ. ಏನೋ ಐದೋ ಹತ್ತೋ ಚೀಲಗಳಾದರೆ ನೆರೆಯೂರಿನಲ್ಲಿ ಸಿಗಬಹುದು. ಆದರೆ ನಿನಗೆ ಒಂದೇಸಾರಿ ಐವತ್ತು ಚೀಲ ಬೇಕೆಂದು ಹೇಳುತ್ತಿರುವೆ. ಆದ್ದರಿಂದ ನಾಲ್ಕೈದು ಊರುಗಳಿಗೆ ಹೋಗಿ ಸರಕು ಜಮಾವಣೆ ಮಾಡಬೇಕಾಗುತ್ತದೆ. ನಾವು ಬೆಳಗಿನ ಜಾವವೇ ಹೊರಡೋಣ" ಎಂದ. ಇದಕ್ಕೆ ಹುಸೇನ್ ಒಪ್ಪಿಕೊಂಡ.

ಮಹಮದ್-ಅಲೀಖಾನ್, ಹೈದರಾಬಾದು.

ಏರ್ಪಾಟಾದಂತೆ ಉಮಾಪತಿ ಕೋಳಿ ಕೂಗಿದಕೂಡಲೇ ಎದ್ದು ಹುಸೇನನನ್ನು ಸಂಗಡ ಕರೆದುಕೊಂಡು ಹೊರಟ. ಹೊಲದ ಕಟ್ಟೆಗಳಮೇಲೆಯೇ ಎರಡು ಮೈಲಿ ದೂರ ನಡೆಯುವಷ್ಟರಲ್ಲಿ ಬೆಳ್ಳಂಬೆಳಗಾಯಿತು. ಆ ಸಮೀಪದಲ್ಲೇ ಪುಷ್ಕಳವಾಗಿ ನೀರಿರುವ ಒಂದು ಕೆರೆ ಕಾಣಿಸಲು, ಉಮಾಪತಿ ತನ್ನ ಸಂಗಡವಿದ್ದ ಸಾಹೇಬನೊಂದಿಗೆ "ಹುಸೇನ ಸಾಬ್ರೇ, ನಾನೀ ಕೆರೆಯಲ್ಲಿ ಮಿಂದು, ಸಂಧ್ಯಾವಂದನೆ ಮಾಡಿಕೊಂಡು, ಒಂದರ್ಧ ಗಂಟೆಯಲ್ಲಿ ಬಂದು ಬಿಡುವೆನು. ಅಷ್ಟರವರೆವಿಗೂ ಈ ಬಂಡೆಮೇಲೆ ಕುಳಿತಿರಿ" ಎಂದು ಹೇಳಿ ಹೊರಟುಹೋದ.



ಉಮಾಪತಿ ಸಂಧ್ಯಾವಂದನೆ ಮಾಡುವ ಸಮಯದಲ್ಲಿ ಸಾಹೇಬನು ತನ್ನೊಂದಿಗೆ ತಂದಿದ್ದ ಚಿಕ್ಕ ಚೌಕವನ್ನು ಬಂಡೆಯಮೇಲೆ ಹರಡಿ ನಮಾಜು ಮಾಡುತ್ತಿದ್ದ. ಇಷ್ಟರಲ್ಲಿ ಉಮಾಪತಿ ಬಂಡೆಯ ಹತ್ತಿರ ಬಂದು, ನಮಾಜುಮಾಡುತ್ತಿದ್ದ ಹುಸೇನನನ್ನು ಕಂಡು, ಆತನ ಮತದೀಕ್ಷೆಗೆ ಸಂತೋಷ ಪಟ್ಟ. 'ಹೆಸರು ಬೇರೆಯೇ ಹೊರತು, ಯಾವ ಮತಸ್ಥ ಯಾವ ರೂಪದಲ್ಲಿ ಸೇವೆ ಮಾಡಿದರೂ ದೇವರು ಎಲ್ಲರಿಗೂ ಒಬ್ಬನೇ ಅಲ್ಲವೇ. ನಾನು ಮಾಡುವ ಸಾಷ್ಟಾಂಗ ನಮಸ್ಕಾರ, ಈ ಹುಸೇನ್, ಮಾಡುತ್ತಿರುವ ನಮಾಜು ಆ ಭಗವಂತನಿಗೇ ಸೇರುತ್ತದೆ. ಆಹಾ! ಸೃಷ್ಟಿಕರ್ತನ ಪರಿಪಾಲನೆ ಎಷ್ಟು ವಿಚಿತ್ರವಾಗಿದೆ.' ಎಂದು ಅನೇಕ ವಿಧವಾಗಿ ಉಮಾಪತಿ ಆ ಜಗನ್ನಾಟಕ ಸೂತ್ರಧಾರನ ಪರಿಪಾಲನೆಯ ಸರ್ವ ಸಮತ್ವಕ್ಕೆ ಆನಂದ ಪಡುತ್ತಿದ್ದ.

ಹೀಗೇ ಆತನು ಆಲೋಚಿಸುತ್ತಿರುವಾಗ ಅದೃಷ್ಟವಶಾತ್ ಅಲ್ಲೇ ಒಂದು ತುಲಸಿಗಿಡ ಕಾಣಿಸಲು, ಉಮಾಪತಿ ತುಂಬಾ ಸಂತೋಷಪಟ್ಟು, ಅಪರಿಮಿತವಾದ ಭಕ್ತಿಯಿಂದ ಆ ಗಿಡವಿದ್ದ ಸ್ಥಳವನ್ನು ಶುಭ್ರಗೊಳಿಸಿ, ತನ್ನ ಚೊಂಬಿನಲ್ಲಿದ್ದ ಅರ್ಧ ಭಾಗ ನೀರನ್ನು ಅದಕ್ಕೆ ಸುರಿದು ಭಕ್ತಿಯಿಂದ ಕೈಮುಗಿದು ಅಡ್ಡಬಿದ್ದು ನಮಸ್ಕಾರ ಮಾಡಿದ.

ಇಷ್ಟರಲ್ಲಿ ನಮಾಜು ಮುಗಿಸಿಕೊಂಡು ಬಂದ ಹುಸೇನ್, ಉಮಾಪತಿ ಮಾಡುತ್ತಿದ್ದ



ಕೆಲಸ ನೋಡಿ ಪರಿಹಾಸದಿಂದ ನಗುತ್ತಾ "ಹೇನು, ಐನೋರೇ, ಗಿಡ ಬಳ್ಳೀಗೇ ನಮಸ್ಕಾರಮಾಡ್ತೀರಿ ನೀವು. ಹೆಂತಾಪ್ಪೂ ನಿಂದೂ ಜಾತಿ" ಎಂದು ಹಾಸ್ಯಮಾಡಿದ. ಪಂತರು ಲವಲೇಶವಾದರೂ ಕೋಪಮಾಡಿಕೊಳ್ಳಲಿಲ್ಲ. "ಹುಸೇನರೇ, ನಮ್ಮ ದೇವರು ನಾರಾಯಣ. ಆತನ ಪತ್ನಿ ಲಕ್ಷ್ಮೀದೇವಿ ಈ ತುಳಸಿಗಿಡದ ರೂಪದಲ್ಲಿರುವರೆಂದು ಹಿಂದೂಗಳ ನಂಬಿಕೆ. ಅದಕ್ಕೆಂತಲೇ ಪ್ರತಿ ಮನೆಯಲ್ಲೂ ನಮ್ಮ ಜನ ಅಂದವಾದ ಬೃಂದಾವನವನ್ನು ಕಟ್ಟಿಸಿ, ಅವುಗಳಲ್ಲಿ ತುಳಸಿಗಿಡಗಳನ್ನು ನೆಟ್ಟು, ದಿನಾ ಪೂಜಿಸುವರು. ನಿಜ ನುಡಿಯಬೇಕೆಂದರೆ ತುಳಸಿಗಿಡವಿಲ್ಲದ ಹಿಂದೂ ಗೃಹವೇ ಇಲ್ಲ. ಈ ತುಳಸಿ ಮಣಿ ಹಾರಗಳನ್ನು ಕೊರಳಲ್ಲಿ ಧರಿಸುವರು."

ಎಂದು ಪವಿತ್ರವಾದ ತುಳಸಿಯನ್ನು ಕುರಿತು ವಿವರಿಸಿ ಹೇಳಿದ.

ಎಷ್ಟು ಹೇಳಿದರೂ ಸಾಹೇಬನಿಗೆ ಈ ಮಾತು ಹುಚ್ಚುಹುಚ್ಚಾಗಿ ಕಂಡಿತು. ಸರಿ ಬೇಳದಿದ್ದರೆ ಹೋಗಲಿ, ಅವರವರ ನಂಬಿಕೆ ಅವರದು ಎಂದು ಸುಮ್ಮನಿದ್ದು, ತನ್ನ ವ್ಯಾಪಾರವೇನೋ ನೋಡಿಕೊಳ್ಳಕೂಡದೆ? ಊಹೂಂ. ಹಾಗೆ ಮಾಡದೆ ಹುಸೇನ ಆವೇಶದಿಂದ "ಹೇನು ಹೇಳ್ತೀರಿ ನೀವು. ಗಿಡದಲ್ಲಿ ಖುದಾ ಇರ್ತಾನೆ? ಹೆಲ್ಲಿ, ನಿಂದೂ ದೇವರು? ಹೇನೂ ಮಾಡ್ತಾನೋ ನೋಡೋಣ" ಎಂದು ಹೇಳುತ್ತಾ ಆ ತುಳಸಿಗಿಡವನ್ನು ಕಿತ್ತು, ಎಲೆಗಳನ್ನು ಚೂರು ಚೂರು ಮಾಡಿ ಹೊಸೆದುಹಾಕಿ, ಕೈಗೆ ಅಂಟಿಕೊಂಡಿದ್ದ ರಸವನ್ನ ಮೈಗೆಲ್ಲಾ ಹಚ್ಚಿಕೊಂಡ. "ಹೆಲ್ಲಿ ನಿಮ್ದೂ ದೇವರೂ? ಹೇನು ಮಾಡ್ತ ನಮ್ಮನ್ನು" ಎಂದು ಮಿಸೆ ಮತ್ತು ಗಡ್ಡವನ್ನು ನೀವಿಕೊಳ್ಳುತ್ತಾ ಪ್ರಶ್ನೆ ಮಾಡಿದ. ಎಷ್ಟೋ ಜನ ಇಂತಹ ಮೂರ್ಖರನ್ನು ನೋಡಿದ್ದ ಪಂತ ಈ ಅವಮಾನಕ್ಕೆ ಸ್ವಲ್ಪವಾದರೂ ಕೋಪಿಸಿಕೊಳ್ಳಲಿಲ್ಲ. ಸಮಯ ನೋಡಿ ಹುಸೇನನಿಗೆ ಬುದ್ಧಿ ಕಲಿಸಬೇಕೆಂದು ನಿಶ್ಚಯಿಸಿಕೊಂಡು ಸಮಯ ಕಾಯುತಿದ್ದ.

ಮತ್ತೊಂದು ಮೈಲು ದೂರ ನಡೆದು ಹೋಗಲು, ಪೊದೆಗಳಲ್ಲಿ ಒಂದು ತುರುಚಿ

ಗಿಡ ಕಾಣಿಸಿತು ಉಮಾಪತಿಗೆ. ಆತ ಪರಮಾನಂದ ಭರಿತನಾದ. ಯುಕ್ತಿ ಪರನಾದ ಉಮಾಪತಿ ಗಬಗಬನೆಂದು ಆ ಪೊದೆಯೊಳಗೆ ನುಗ್ಗಿ ಆ ಗಿಡವಿದ್ದ ಸ್ಥಳವನ್ನು ಶುಭ್ರಗೊಳಿಸಿ, ತಮ್ಮ ಚೊಂಬಿನಲ್ಲಿ ಮಿಕ್ಕಿದ್ದ ನೀರನ್ನು ಅದರ ಮೇಲೆ ಎರೆದು, ಭಕ್ತಿಯಿಂದ ಪ್ರದಕ್ಷಿಣೆ ಮಾಡಲಾರಂಭಿಸಿದ.

ಬಿಸಿಲಿಗೆ ಆ ತುರುಚಿಗಿಡ ಎಲೆ ತುಂಬಿ ನಿಗನಿಗನೆಂದು ಮೆರೆಯುತ್ತಿತ್ತು. ನೋಡಲು ಆನಂದಕರವಾಗಿತ್ತು. ಆ ಗಿಡಕ್ಕೆ ನಮಸ್ಕಾರ ಮಾಡುತ್ತಿದ್ದ ಉಮಾಪತಿಯನ್ನು ಕಂಡು "ಹೇನಯ್ಯಾ, ಪಂತ್ರೀ, ಎಜ್ಜೆ ಎಜ್ಜೆಗೂ ಗಿಡಕ್ಕೆ ನಮಸ್ಕಾರ್ ಮಾಡ್ತೀ. ನಿಂಗೇ ಏನಾದರೂ ಪಾಗಲ್ ಹಿಡೀತು?" ಎಂದು ಹಿಂದೆ ಮಾಡಿದಂತೆ ಗೇಲಿ ಮಾಡಿದ.

ಅದಕ್ಕೆ ಪಂತರು "ಅಯ್ಯಾ, ಹುಸೇನ್ ಸಾಬಿ, ಆ ತುಳಸಿಗಿಡಕ್ಕಿಂತಲೂ ಇದು ಹಿಂದೂಗಳಿಗೆ ತುಂಬಾ ಪವಿತ್ರವಾದದ್ದು. ಇದನ್ನು ನಾವು 'ಕಂಡೂತಿ ಕಲ್ಪತರು' ಎಂದೂ ಹೇಳುತ್ತೇವೆ. ಈಗಿಡದಲ್ಲಿ ದೇವರು ಪ್ರತ್ಯಕ್ಷವಾಗಿ ಕಾಣಿಸುತ್ತಾನೆ. ಈಗಿಡ ಕಾಣುವುದೇ ಅಪರೂಪ. ಇಂದು ನನ್ನ ಅದೃಷ್ಟವಶದಿಂದ ನನ್ನ ಕಣ್ಣಿಗೆಬಿತ್ತು. ನಾನೀಗ ಭಕ್ತಿಯಿಂದ ಪೂಜೆಮಾಡಿ, ಭಗವಂತನನ್ನು ಪ್ರತ್ಯಕ್ಷ ಮಾಡಿಕೊಳ್ಳ ಬೇಕಾಗಿರುವುದರಿಂದ




ಸ್ವಲ್ಪ ಸಮಯ ನಿಶ್ಚಲವಾಗಿ ಜಪಮಾಡಲು ಬಿಡು. ಹಾಗೇಹೀಗೆ ಎಂದು ಈ ವಿಷಯದಲ್ಲಿ ನೀನು ದೂಷಣೆಮಾಡಿದರೆ ನಾನು ಸಹಿಸಲಾರೆ" ಎಂದು ಎಚ್ಚರಿಕೆಯಿತ್ತ.

ಉಮಾಪತಿಯ ಎಚ್ಚರಿಕೆಯ ಮಾತುಗಳು ಸಾಹೇಬನನ್ನು ಮತ್ತಷ್ಟು ಕೆರಳಿಸಿತು. "ಏನ್ ನಿಮ್ದು ದೇವ್ರು? ಗಿಡದೊಳಗೆ ದೇವ್ರು, ಗುಡೀ ಒಳಗೆ ದೇವ್ರು? ಅದ್ಕೇನೆ ನಿಂಜಾತಿ ನಮ್ಗೆ ಹಿಡಿಸಾಕಿಲ್ಲ." ಎಂದು ಗಬಕ್ಕನೆ ಆ ಗಿಡವನ್ನು ತನ್ನ ಎರಡು ಕೈಗಳಿಂದ ಕಿತ್ತು, ನೋಡುತೀರಿಸಿ ಕೊಳ್ಳುವಂತೆ ಅದನ್ನು ಚೆನ್ನಾಗಿ ಹಿಚುಕಿ, ಹಸರು ರಸವನ್ನು ಮೈಗೆಲ್ಲಾ ಬಳಿದುಕೊಂಡ. ಅಲ್ಲಿಗೂ ಆತನ ಕೋಪ ಶಾಂತವಾಗದೆ, ಅದನ್ನು ಕಾಲಕೆಳಗೆಹಾಕಿ ತುಳಿದ. ತುರುಚಿಗಿಡದ ಮಹಾತ್ಮೆ ನಿಮ್ಮಲ್ಲಿ ಎಷ್ಟೋ

ಜನಕ್ಕೆ ಗೊತ್ತಿರಬಹುದು. ಅದರ ಉರಿ ತಡೆಯಲಸಾಧ್ಯ.

ಸಾಹೇಬನ ಚೇಷ್ಟೆಗಳೆಲ್ಲವನ್ನೂ ನೋಡುತ್ತಿದ್ದ ಉಮಾಪತಿ ಏನೂ ಹೇಳಲಿಲ್ಲ. ಸಾಹೇಬನಿಗೆ ಬುದ್ಧಿ ಕಲಿಸಲು ಬೇಕೆಂತಲೇ ಪಂತ ಈ ರೀತಿ ಮಾಡಿದ್ದು. ಹುಸೇ಼ನ್ ಸಾಬನಿಗೆ ಮೈಯಲ್ಲಾ ಉರಿಯಲು ಮೊದಲಾಯಿತು. ಪರಚಿಕೊಳ್ಳಲು ಪ್ರಾರಂಭಿಸಿದ. ಶರೀರವೆಲ್ಲಾ ನವೆಯಾಗಿದೆ. ಎಲ್ಲೆಂದು ಪರಚಿಕೊಳ್ಳುತ್ತಾನೆ. ಹೊತ್ತು ಕಳೆದಂತೆಲ್ಲಾ ನವೆ ತೀವ್ರವಾಗಿ ಬಾಧೆ ಅತಿಯಾಗಿ, ಸಾಹೇಬ 'ಹೋ ಹೋ' ಎಂದು ಕೂಗಾಡಲು ಪ್ರಾರಂಭಿಸಿದ.

ಮತ್ತೊಂದು ಹತ್ತು ನಿಮಿಷಗಳಾದ ತರುವಾಯ ಆತನಿಗೆ ಸಹಿಸಲಾಗದಾಯಿತು ಸಂಕಟ. ಬಾಧೆ ತಾಳಲಾರದೆ "ಹೇನಯ್ಯಾ ಪಂತ್ರೇ, ಅರೆ ಅಲ್ಲಾ" ಎಂದು ಆತ ಬೊಬ್ಬೆಯಿಡಲು, ಮುಚ್ಚುಮರೆಯಿಲ್ಲದೆ ಪಂತರು "ಹುಸೇ಼ನ್ ಸಾಬ್ರೇ, ಇದೇ ನಮ್ಮ ದೇವರ ಮಹಿಮೆ, ಆತನು ಪ್ರತ್ಯಕ್ಷವಾಗುವ ಮೊದಲು ಭಕ್ತರು ಎಷ್ಟು ನಿಶ್ಚಲವಾಗಿರುವರೋ ಎಂದು ಈ ರೀತಿ ಪರೀಕ್ಷೆ ಮಾಡುತ್ತಾನೆ. ಇಲ್ಲದಿದ್ದರೆ ಇಲ್ಲ." ಎಂದ. ಹುಚ್ಚು ಹಿಡಿದವನಂತೆ ಕುಣಿದಾಡುತ್ತಾ ಹುಸೇ಼ನ್ "ನಂಗೆ ಪ್ರತ್ಯೇಕ್ಷ ಬೇಕಿಲ್ಲ ಸೋಮಿ. ನಿಂಗೆ ಸಲಾಂ ಹಾಕ್ತೇನೆ. ನಿಂದೂ ದೇವರ್ಗೆ ಹೊಲ್ಟ್ ಹೋಗ್ ಅಂತ ಏಳಿಬಿಡಿ" ಎಂದು ಕಾಲುಗಳ ಮೇಲೆ ಬಿದ್ದು ಬೇಡಿಕೊಂಡ.

ಪಂತನು ಮರುಕಗೊಂಡು, ನೆರೆಯೂರು ಸೇರಿಕೊಂಡಕೂಡಲೇ ಸಾಹೇಬನಿಗೆ ಚಿಕಿತ್ಸೆ ಮಾಡಿಸಿದ. ಆತನಿಗೆ ಬಾಧೆ ಕಡಿಮೆಆಯಿತು. ತರುವಾಯ ಹುಸೇನನಿಗೆ ಬೇಕಾದಷ್ಟು ಕಡಲೇಬೇಳೆ ಅಲ್ಲೇ ಸಿಕ್ಕಿತು. ಅದರಿಂದ ಹುಸೇನನ ಆನಂದಕ್ಕೆ ಎಲ್ಲೆಯೇ ಇಲ್ಲ.

ಅಂದಿನಿಂದ ಹುಸೇನನಿಗೆ ಹಿಂದುಗಳ ದೇವರೆಂದರೆ ಭಯ ಭಕ್ತಿ, ವಿಶ್ವಾಸಗಳು ಏರ್ಪಟ್ಟವು. ವೃಥಾ ದ್ವೇಷ ತೊರೆದು, 'ಅವರ ಮತ ಅವರಿಗೆ ಹೆಚ್ಚು' ಎಂದು ಸುಮ್ಮನಿರುತ್ತಿದ್ದ.



# ಏಕೆ-ಗೊತ್ತೆ?

## ಸಿವಂಗಿ ಕುಂಟುತ್ತಾ ನಡೆಯುತ್ತದೆ

ಒಂದುದಿನ ಒಂದು ಸಿವಂಗಿ ಅಡವಿಯಲ್ಲಿ ಅಡ್ಡಾಡುತ್ತಿರಲು ಒಂದು ಮೊಲ ಎದುರಾಯಿತು. " ಮೊಲ ಭಾವ, ಮೊಲ ಭಾವ, ಏನಾದರೂ ಸ್ವಾರಸ್ಯವಾದ ಸುದ್ದಿ ಸಮಾಚಾರ ಇದೆಯೆ?" ಎಂದು ಕೇಳಿತು ಸಿವಂಗಿ.

" ಇಲ್ಲದೇನು? ನಾನಿಂದು ಒಂದು ವಿಚಿತ್ರವಾದ ಪ್ರಾಣಿಯನ್ನು ಕಂಡೆ." ಎಂದಿತು ಮೊಲ. ಆ ಮಾತು ಕೇಳಿದಾಗಲಿಂದ ಸಿವಂಗಿಗೆ ಕುತೂಹಲ ಹೆಚ್ಚಾಯಿತು. ಆ ವಿಚಿತ್ರ ಪ್ರಾಣಿ ಹೇಗಿರುವುದೋ ತಿಳಿಯ ಹೇಳೆಂದು ಪಟ್ಟು ಹಿಡಿಯಿತು.

ಅದಕ್ಕೆ ಮೊಲ " ಏನು ಹೇಳಲಿ, ಆ ಪ್ರಾಣಿಗೆ ಕಾಲೇನೋ ಇದೆ, ಆದರೆ ಉಗುರಿಲ್ಲ. ಉಗುರೇನು ಬಂತು, ಅಸಲು ಬೆರಳುಗಳೇ ಇಲ್ಲ. ಅದೊಂದೇ ಅಲ್ಲ, ಅದರ ಪಾದಗಳು ಮರದಹಲಗೆಯಂತೆ ಎರಡಾಗಿ ಸೀಳಿರುತ್ತದೆ. ಕಥೆ ಅಷ್ಟಕ್ಕೆ ಮುಗಿಯಿತೇ ಅಂದರೆ ಇಲ್ಲ. ನಾವು ಯಾವ ಬಣ್ಣವನ್ನು ನೆನೆಸಿಕೊಂಡರೆ ಆ ಬಣ್ಣ ಅದರ ಮೈಮೇಲೆ ಕಾಣಿಸುತ್ತದೆ. ಮತ್ತೊಂದು ವಿಚಿತ್ರ. ಅದು ಒಂದು ಕಣ್ಣಿನಿಂದ ಮುಂದಕ್ಕೂ, ಎರಡನೇ ಕಣ್ಣಿನಿಂದ ಹಿಂದಕ್ಕೂ, ನೋಡುತ್ತಿರುತ್ತದೆ." ಎಂದು ಇನ್ನೂ ಏನೇನೋ ಹೇಳುತ್ತಿರುವಲ್ಲಿ, ಸಿವಂಗಿ ಪಕಪಕ ಅಂತ ನಗಲು ಆರಂಭಿಸಿತು.

ಇಷ್ಟಕ್ಕೂ ಆ ಮೊಲ ಗೋಸುಂಬೆಯನ್ನು ಕುರಿತು ಈರೀತಿ ಬಣ್ಣಿಸಿತೆಂದು ಸಿವಂಗಿಗೆ ಹೊಳೆಯಲೇ ಇಲ್ಲ. ಮೊಲ ಹೇಳಿದ ಮಾತು ಅದರ ಮನಸ್ಸಿಗೆ ಚೆನ್ನಾಗಿ ನಾಟಿತು. ಆ ವಿಷಯ ಜ್ಞಾಪಕಕ್ಕೆ ಬಂದಾಗಲೆಲ್ಲಾ ಅದು ಒಂದೇಸಮನೆ ನಗುತ್ತಿತ್ತು. ಕ್ರಮೇಣ ಈ ನಗು ಅದಕ್ಕೆ ಒಂದು ಅಭ್ಯಾಸವಾಗಿ ಬಿಟ್ಟಿತು. ನಗುವಿನ ಕಾರಣವೇ ಮರೆತಿತು.

ಸಿವಂಗಿ ಹೀಗೆ ಹುಚ್ಚುಚ್ಚಾಗಿ ನಗುವುದನ್ನು ಕಂಡು ಇತರ ಜಂತುಗಳು ಇದನ್ನು ಒಂದು ಹುಚ್ಚುಮುಂಡೆ ಎಂದೆಣಿಸಿದವು. ಸರಿ, ಜಂತುಗಳು ಹಾಸ್ಯಮಾಡಲು ಸಿವಂಗಿಗೆ ಕೋಪವೂ, ಪೌರುಷವೂ ಉಂಟಾಯಿತು. ಈಗಲೂ ಯಥಾರ್ಥ ತಿಳಿಯದೆ ಆ ತಿಳಿಗೇಡಿ ಸಿವಂಗಿ " ಏನು ಈ ಹುಚ್ಚುನಗು? ಯಾಕೆ ಈರೀತಿ ಬರುತ್ತಿರುವುದೋ ನನಗೇ ತಿಳಿಯ

ದಲ್ಲಾ. ಆ ದಿನ ಮೊಲ ಬಂದು ಏನೋ ವಿಚಿತ್ರವಾದ ಸುದ್ಧಿ ಹೇಳಿತು. ಆಗಿನಿಂದ ನನಗೆ ಈ ಹುಚ್ಚು ನಗು ಪ್ರಾರಂಭವಾದಂತಿದೆ. ಎಷ್ಟೋ ಪ್ರಯತ್ನ ಮಾಡಿದರೂ ಈ ನಗುವನ್ನು ತಡೆಯಲಾಗುವುದಿಲ್ಲ" ಎಂದುಕೊಂಡಿತು. ಆದರೆ ಈಗ ಏನುತಾನೇ ಮಾಡುವ ಹಾಗಿದೆ?

ಮತ್ತೊಂದುದಿನ ಮೊಲ ಎದುರುಸಿಕ್ಕಲು ತನ್ನ ಈ ನಗುವಿಗೆ ಅದೇ ಕಾರಣವೆಂದು ಹೊಟ್ಟೆಯಲ್ಲಿರುವ ಕಿಚ್ಚನ್ನೆಲ್ಲಾ ಹೊರಗೆಡವಿ, "ಆಹಾ, ನೀನೋ! ಆ ನಿನ್ನ ಕಾಲೋ! ಬಹಳ ಸೊಗಸಾಗಿದೆ" ಎಂದು ಹಾಸ್ಯಮಾಡಿತು.

ಈ ಮಾತಿಗೆ ಮೊಲಕ್ಕೆ ಕೋಪ ಬಂತು. ಆದರೆ ಹೊರಗೆಮಾತ್ರ ಏನೂ ಹೇಳದೆ ಆಗ ಸುಮ್ಮನಿದ್ದುಬಿಟ್ಟಿತು. ಮತ್ತೊಂದುದಿನ ಅದು ಸಿವಂಗಿಯನ್ನು ಪುಸಲಾವಣೆ ಮಾಡಿ ಅಡ್ಡಾಡಲು ಒಂದು ರಹಸ್ಯ ಪ್ರದೇಶಕ್ಕೆ ಕರೆದುಕೊಂಡುಹೋಯಿತು. ಮಧ್ಯದಾರಿಯಲ್ಲಿ "ಕಣ್ಣು ಮುಚ್ಚಿಕೊಂಡು ಯಾರು ಹಿಂದಕ್ಕೆ ನಡೆಯುವರೋ ಅವರೇ ಜಯಶಾಲಿಗಳು. ಏನು?" ಎಂದಿತು. ಬುದ್ಧಿಯಿಲ್ಲದ ಸಿವಂಗಿ ಮೊಲ ಹಾಕಿದ ಸವಾಲನ್ನು ಒಪ್ಪಿ, ಕಣ್ಣು ಮುಚ್ಚಿಕೊಂಡು ಹಿಂದೆ ಹಿಂದಕ್ಕೆ ನಡೆಯಲು ಪ್ರಾರಂಭಿಸಿತು. ಹೋಗಿಹೋಗಿ ಅದು ಒಂದು ಆಳವಾದ ಹಳ್ಳದಲ್ಲಿ ಮತ್ತೆ ಏಳಲಾರದೆ ಬಿದ್ದುಹೋಯಿತು. ಆಗ ಆ ಮೊಲ ತನ್ನ ಕೈ ಆಸರೆಕೊಟ್ಟು ಮೇಲಕ್ಕೆ ಎಬ್ಬಿಸಲು, ಕುಂಟುತ್ತಾ ಕುಂಟುತ್ತಾ ಹೆಜ್ಜೆ ಹಾಕುತಿತ್ತು ಸಿವಂಗಿ. ಪಾಪ, ಅದರ ಹಿಂದಿನ ಕಾಲುಗಳು ಮುರಿದು ಹೋಗಿದ್ದವು.

ಆಗ ಮೊಲ ಅದರೊಂದಿಗೆ "ಎಲೈ ಹುಚ್ಚು ಸಿವಂಗಿಭಾವ, ನಾನೇನೋ ತಮಾಷೆಗೆ ವಿಚಿತ್ರವಾದ ಕಥೆ ಹೇಳಿದರೆ ಅದನ್ನು ಅರ್ಥ ಮಾಡಿಕೊಳ್ಳದೆ ಹೋದೆ. ನನ್ನ ಮೇಲೆ ದೂರು ಹೊರಿಸಿದೆ. ನನ್ನನ್ನೂ ಹಾಸ್ಯಮಾಡಿದೆ. ಈಗ ನಿನ್ನ ನಡೆ ಹೇಗಿದೆ? ನೀನು ಚೆನ್ನಾಗಿರುವೆಯಲ್ಲವೇ? ಕುಂಟುಕಾಲು ಯಾರದೋ ಹಿಂದೆ ತಿರುಗಿನೋಡು" ಎಂದು ಅವಹೇಳನೆ ಮಾಡಿತು.

ಅಂದಿನಿಂದ ಪಾಪ ಸಿವಂಗಿಗೆ ಹುಚ್ಚು ನಗುಮಾತ್ರವಲ್ಲ, ಹಿಂದಿನ ಎರಡು ಕಾಲು ಕುಂಟೂ ಆಯಿತು.



## ನಗೆಹನಿ

ತಂದೆ—ನಿಮ್ಮಲ್ಲಿ ಹೆಚ್ಚು ಬಲಿಷ್ಠರು ಯಾರೋ!
ಮಗ—ಸಿನಿಮಾ ಟಿಕೆಟ್ಟು ಮೊದಲು ತೆಗೆದು ಕೊಂಡವರು.

* * *

ಪಂಡಿತರು—ಲೋ, ಪುಟ್ಟ! 'ರಾಮನಿಗೆ ಹಾವುಕಡಿಯಿತು'-ಇದು ಯಾವಕಾಲವೋ?
ಪುಟ್ಟ—ಮರಣಕಾಲ ಸಾರ್!

—ಜಿ. ನಾಗರಾಜರಾವ್.

ಬಂದವ—ಲೋ, ನಿಮ್ಮ ತಂದೆ ಎಲ್ಲೋ? ಎರಡು ದಿನದಿಂದ ಕಾಣಲೇ ಇಲ್ಲ.
ಹುಡುಗ—ಹುಚ್ಚಾಸ್ಪತ್ರೆಗೆ ಸೇರಿದ್ದಾರೆ.
ಬಂದವ—ಅಯ್ಯೋ! ಮೊನ್ನೆ ಚೆನ್ನಾಗಿದ್ರಲ್ಲೋ!
ಹುಡುಗ—ಅಲ್ಲಾ! ಡಾಕ್ಟರ ಕೆಲಸಕ್ಕೆ ಸೇರಿದಾರೆ.

—ಎಚ್. ಬಿ. ಸುಬ್ಬೇಗೌಡ.

* * *

ತಂದೆ—ಲೋ, ರಾಮು, ಒಂದು ವೀಸೆ ಸಕ್ಕರೆ, ಒಂದು ಸೇರು ಕಡ್ಲೆಹಿಟ್ಟು, ಒಂದು ಸೇರು ತುಪ್ಪ ಮೂರನ್ನೂ ಈಗಿನ ಬೆಲೆಗೆ ತೆಗೆದು ಕೊಂಡರೆ ಒಟ್ಟು ಏನಾಗುತ್ತೋ?
ಸಾಪಾಟ್ರಾಮು—ಭರ್ಜರಿಯಾದ ಮೈಸೂರು ಪಾಕ್ ಆಗುತ್ತೇಪ್ಪಾ! ಹೋಗಿ ತರಲೇನಪ್ಪಾ!

* * *

ಪ್ರಯಾಣಿಕ— (ಕಂಡಕ್ಟರನ್ನು ಕುರಿತು) ಏನಯ್ಯಾ? ಇಷ್ಟು ಲೋಡು ಈದಿನ! ಕೂಡಲಿಕ್ಕೆ ಸರಿಯಾದ ಸ್ಥಳವೂ ಇಲ್ಲ. ಓವರ್ ಲೋಡ್ ಎಂದು ಅಧಿಕಾರಿಗಳಿಗೆ ತಿಳಿಸಲೇ?
ಕಂಡಕ್ಟರ್—ಅಷ್ಟೇಕೆ ತೊಂದರೆ ರಾಯರೇ? ಅವರೂ ಅವರ ಸಂಬಧೀಕರೂ ಇತ್ಯಾದಿಗಳೆಲ್ಲರೂ ಇಲ್ಲೇ ಕುಳಿತಿದ್ದಾರೆ. ತಿಳಿಸಿಬಿಡಿ.

—ಬಿ. ಮುನಿರಾಮು.

## ಒಗಟುಗಳು

ಇವುಗಳೇನು ಹೇಳಬಲ್ಲಿರಾ?

1. ಎಲೆಯಿಲ್ಲ ಸುಣ್ಣವಿಲ್ಲ, ಬಣ್ಣವಿಲ್ಲ ತುಟಿ ಕೆಂಪಗಿದೆ.
   ಮಳೆಯಿಲ್ಲ ಬೆಳೆಯಿಲ್ಲ ಹುಲ್ಲಿಲ್ಲ, ಮೈ ಹಸುರಿಗಿದೆ.

—ಎಸ್. ಎನ್. ವೇದವಲ್ಲಿ.

2. ಹುಲಿಯ ಚಿಕ್ಕಮ್ಮ, ಇಲಿಯ ಮುಕ್ಕಮ್ಮ
3. ಗುಡುಗು ಗುಡುಗಿದರೆ ಸಾವಿರ ನಯನಗಳರಳುವುವು.

—ಪೂರವಿರಾವ್.

4. ತಾಯಿ ಪಾತಾಳಕ್ಕೆ, ತಂದೆ ಆಕಾಶಕ್ಕೆ, ಮಗ ವ್ಯಾಪಾರಕ್ಕೆ, ಮಗಳು ಮದುವೆಗೆ ಹೋಗಿದ್ದಾರೆ.
5. ಗೂಡಿನಲ್ಲಿನ ಪಕ್ಷಿ ನಾಡೆಲ್ಲಾ ನೋಡುವುದು
6. ಬೀದೀಲಿ ಹೋಗೋ ದಾಸಯ್ಯ, ಹಾಕಿದವರಾರು ಕಡ್ಡಿ ನಾಮ?

—ಎಂ. ಟಿ. ಜಾನಕಿ.

7. ಮರನು ಮರನೇರಿ, ತಾಮತ್ತೆಮರನೇರಿ, ಬಸವನಾ ಕತ್ತೇರಿ ತಿರುಗುತಿದೆ.
8. ಪ್ರಾಣವಿಲ್ಲ ಹಾರುತ್ತೆ. ಜೀವವಿಲ್ಲ ಕೂಗುತ್ತೆ.

## ನಾನು ಯಾರು

ಇದ್ದಲ ನುಂಗುತ
ಗದ್ದಲ ಮಾಡುತ
ಉದ್ದಕು ಓಡುತ
ಮುಂದಕೆ ಸಾಗುವ ನಾನ್ಯಾರು.
ಆವಿಯ ಬಲದಿಂ
ಕಾವಿನ ಛಲದಿಂ
ನೀರಿನ ಫಲದಿಂ
ಹರಿಯುತ ಸಾಗುವ ನಾನ್ಯಾರು?

—ಕನ್ನಡ ಕಂದ.

13. ಮದುವೆಯಾಗೋ ಬ್ರಾಹ್ಮಣ ಎಂದರೆ ನೀನೇ ಹೆಂಡತಿಯಾಗು ಎಂದನಂತೆ

14. ಅಕ್ಕ ಸತ್ತರೆ ಅಮಾವಾಸ್ಯೆನಿಂತೀತೆ? ಅಣ್ಣ ಸತ್ತರೆ ಹುಣ್ಣಿಮೆ ನಿಂತೀತೆ?

15. ಧನವಿಲ್ಲದ ಮನುಷ್ಯ, ನಾರಿಯಿಲ್ಲದ ಮನೆ, ಬೆಂಕಿಯಿಲ್ಲದ ಒಲೆ ವ್ಯರ್ಥ.

16. ಅಕ್ಕಕ್ಕನ ಕಟ್ಟಿಕೊಂಡು ಆಕೆರೆಗೆ ಬೀಳಲೋ ಈಕೆರೆಗೆ ಬೀಳಲೋ!

17. ಇಕ್ಕುವವಳು ನಮ್ಮನಳಾದರೆ ಕೊಟ್ಟಿಗೆಯಲ್ಲಾದರೂ ಉಂಡೇನು.

18. ಹುರಿಯುವ ಬಾಣಲೆಯಿಂದ ಜಾರಿ ಉರಿಯವ ಒಲೆಗೆ ಬಿದ್ದಂತೆ.

19. ಅತ್ತೆ ಸತ್ತು ಆರು ತಿಂಗಳಿಗೆ ಸೊಸೆ ಕಣ್ಣಲ್ಲಿ ನೀರು ಬಂದಂತೆ.

20. ಕಂಕುಳಲ್ಲಿ ಮಗು ಎತ್ತಿಕೊಂಡು ಊರೆಲ್ಲಾ ಹುಡುಕಿದಳಂತೆ.

21. ಸೋದರತ್ತೆಗೆ ಮೀಸೆ ಬಂದರೆ ಚಿಕ್ಕಪ್ಪ ಎನಿಸಿಕೊಂಡಾಳೇ.

22. ಗಂಡ ಪಟ್ಟೆ ಸೀರೆ ತರುತ್ತಾನೆಂದು ಇದ್ದ ಸೀರೆ ಸುಟ್ಟಳಂತೆ.

23. ಮಕ್ಕಳಿಲ್ಲದ ಮನೆ ಶೂನ್ಯ; ಗೃಹಿಣಿಯಿಲ್ಲದ ಗೃಹ ಶೂನ್ಯ.

24. ಎಂಜಲು ಎತ್ತೆ ಎಂದರೆ ಉಂಡವರೆಷ್ಟು ಜನ ಎಂದಳಂತೆ.

25. ಗಂಡ ಹೆಂಡಿರ ಜಗಳದಲ್ಲಿ ಕೂಸು ಗಾಸಿ.

26. ಗೆಜ್ಜೆ ಕಟ್ಟಿದಮೇಲೆ ನಾಚಿಕೆ ಏಕೆ?

27. ಓದಿಲ್ಲ, ಬರಹವಿಲ್ಲ ವರ ಬುದ್ಧಿವಂತ.



ಇನ್ಸ್‌ಪೆಕ್ಟರು—ಲೋ ಹುಡುಗ, ನಿನ್ನ ಹೆಸರೇನೋ?

ಹುಡುಗ—ಯಾವ ಹೆಸರು ಸಾರ್! ನನ್ನಮ್ಮ ಇಟ್ಟಿದ್ದೋ, ನನ್ನಪ್ಪ ಇಟ್ಟಿದ್ದೋ, ಅಲ್ಲಾ ನನ್ನ ತಾತಾ ಕರೆಯುವುದೋ?

ಇನ್ಸ್‌ಪೆಕ್ಟರು—ಶಾಲೆಯಲ್ಲಿ ಕರೆಯುವ ಹೆಸರೇನೋ?

ಹುಡುಗ—"ಗೊಣ್ಣೆ ಸುರುಕ" ಎಂತ.

---

## ಹೆಸರೇನು

1. ಜಲಜಳು ನೀರನ್ನು ಕುಡಿದರೆ ಬಿಟ್ಟರೆ
ವಾಸುದೇವನು ಸುದೇವನನ್ನು ಬಿಟ್ಟರೆ,
ಹರಿ ಹರರಲ್ಲಿ ಹರನು ಚಿತ್ತೈಸಿದರೆ,
ಲಾಲ ರಸದ ರಸವನ್ನು ತೆಗೆದರೆ
ನೆರೆಯವನು ನೆಯನ್ನು ಕೊಟ್ಟರೆ,
ಹರುಷದಿಂದ ಷವನ್ನು ತಳ್ಳಿದರೆ,
ಭಾರತದ ಓರ್ವಪ್ರಸಿದ್ಧ ಪುರುಷನ ಹೆಸರಾಗುವುದು. ಆತನಾರೆಂದು ಹೇಳುವಿರಾ?

—ಎಂ. ಕೃಷ್ಣ.

2. ಸಂಸಾರದಲ್ಲಿನ ಸಾರವನ್ನು ಒಗೆದು
ಗೀಜಗನಿಂದ ಜಗವನ್ನು ಬಿಡಿಸಿ
ತಗಣೆಯಿಂದ ಗಣೆಯನ್ನು ಮುಚ್ಚಿಬಿಟ್ಟರೆ
ಉಳಿಯುವ ನನ್ನನ್ನು ಎಲ್ಲರೂ ಬಯಸುವರು. ನಾನಾರೆಂದು ಬಲ್ಲಿರಾ?

—ಬಿ. ಕೆ. ಕೃಷ್ಣಮೂರ್ತಿ.

# ಮುಖಚಿತ್ರ

ವಿದ್ಯಾಭ್ಯಾಸವೆಲ್ಲವೂ ಮುಗಿಯುತ್ತಾಬರಲು ಒಂದು ದಿನ ಕೃಷ್ಣ ಬಲರಾಮರು ತಮ್ಮ ಗುರುಗಳೊಂದಿಗೆ "ಗುರುವರ್ಯರೇ, ನಮ್ಮ ವಿದ್ಯಾಭ್ಯಾಸ ಮುಗಿಯಿತೆಂದು ತಾವು ಆಜ್ಞೆಕೊಡಿಸಿದಿರಿ. ಕೃಪೆಯಿಟ್ಟು ನಮ್ಮನ್ನು ವಿದ್ಯಾವಂತರನ್ನಾಗಿ ಮಾಡಿ ಉದ್ಧರಿಸಿದಿರಿ. ಅನುಜ್ಞೆಇತ್ತರೆ ಇನ್ನು ನಾವು ನಮ್ಮ ತಂದೆ ತಾಯಿಗಳಿರುವಲ್ಲಿಗೆ ಹೊರಡಬಹುದೇ" ಎಂದು ಕೇಳಿದರು. ಅದನ್ನು ಕೇಳಿ ಸಾಂದೀಪನು "ಒಳ್ಳೆಯದು, ಹಾಗೇ ಮಾಡಿರಿ. ನಿಮಗೆ ಶುಭವಾಗಲಿ" ಎಂದು ಹರಸಿದನು.

"ಆದರೆ,.....ಗುರುಗಳೇ, ಉಳಿದಿರುವ ನಮ್ಮ ಕರ್ತವ್ಯಪೂರೈಸಲು ಗುರುದಕ್ಷಿಣೆಯನ್ನು ಸಮರ್ಪಿಸಬೇಕಲ್ಲವೆ? ಕರ್ತವ್ಯ ಲೋಪಬಾರದಂತೆ ಅದನ್ನು ನೆರವೇರಿಸಲು ಅನುಜ್ಞೆಕೊಡಿರಿ. ತಮ್ಮ ಇಷ್ಟ ಪ್ರಕಾರ ಯಾವ ಕೋರಿಕೆಯನ್ನಾದರೂ ನೆರವೇರಿಸಿಕೊಡಲು ಸಿದ್ಧರಿದ್ದೇವೆ. ಆಜ್ಞಾಪಿಸಿರಿ" ಎಂದು ಕೈ ಜೋಡಿಸಿ ನಿಂತ ಬಾಲಕರನ್ನು ನೋಡಿ ವೃದ್ಧ ಸಾಂದೀಪನಿಗೆ ಸಂತೋಷವು ಉಕ್ಕಿಹರಿಯಿತು. ಏನು ಕೇಳುವುದು? ಈ ಬಾಲಕರ ಬುದ್ಧಿ ಚಾತುರ್ಯಗಳೂ ಶಕ್ತಿಸಾಮರ್ಥ್ಯವೂ ಅದ್ಭುತವಾದವು. ವಿನಯಶೀಲರಾದ ಇವರು ದೈವಾಂಶಸಂಭೂತರೆಂದು ತೋರುತ್ತೆ. ಆದುದರಿಂದ ಅಮಾನುಷ ಕಾರ್ಯಗಳನ್ನೂ ನೆರವೇರಿಸಬಲ್ಲರು—ಎಂದು ಮನದಲ್ಲಿ ಯೋಚಿಸಿ ಸಾಂದೀಪನು ಬಹುದಿನಗಳ ಹಿಂದೆ ಸಮುದ್ರದ ಪಾಲಾಗಿದ್ದ ತನ್ನ ಓರ್ವನೇ ಆದ ಪುತ್ರನನ್ನು ನೆನೆಸಿಕೊಂಡು ಈ ರೀತಿ ಕೇಳಿದನು "ಎಲೈ, ಕೃಷ್ಣ, ಬಲರಾಮ, ನೀವು ಪ್ರಭಾಸ ಕ್ಷೇತ್ರದಲ್ಲಿ ಸಮುದ್ರದಲ್ಲಿ ಮುಳುಗಿ ಹೋದ ನನ್ನ ಪುತ್ರನನ್ನು ನನಗೆ ಬದುಕಿಸಿ ತಂದರೆ ನಿಮ್ಮ ಗುರು ದಕ್ಷಿಣೆ ತಲಪಿದಂತೆ. ಹೋಗಿಬನ್ನಿ, ಜಯವಾಗಲಿ" ಎಂದು ಆಶೀರ್ವದಿಸಿ ಬೀಳ್ಕೊಟ್ಟನು.

ಕೂಡಲೇ ಕೃಷ್ಣ ಬಲರಾಮರು ರಥವನ್ನೇರಿ ಪ್ರಭಾಸ ಕ್ಷೇತ್ರ ತಲುಪಿದರು. ಇವರ ಆಗಮನದ ವಿಷಯವನ್ನರಿತ ಸಮುದ್ರರಾಜನು ಇವರನ್ನು ಆದರಿಸಿ ಪೂಜಿಸಿ "ಎಲೈ ಮಹಾತ್ಮರೇ, ನಿಮ್ಮ ಗುರು ಪುತ್ರನನ್ನು ಈ ಸಮುದ್ರ ಜಲದಲ್ಲಿ ವಾಸಿಸುತ್ತಿರುವ ಪಂಚಜನನೆಂಬ ರಾಕ್ಷಸನು ನುಂಗಿರುವನು." ಎಂದು ತಿಳಿಸಿದನು. ಆದರಂತೆ ಕೃಷ್ಣನು ಸಮುದ್ರ ಜಲವನ್ನು ಪ್ರವೇಶಿಸಿ ರಾಕ್ಷಸನನ್ನು ಕೊಂದು ಹೊಟ್ಟೆಯನ್ನು ಸೀಳಿ ನೋಡಲು ಪಾಂಚಜನ್ಯವೆಂಬ ಶಂಖವು ಸಿಕ್ಕಿತೇ ಹೊರತು ಗುರು ಪುತ್ರನು ಸಿಕ್ಕಲಿಲ್ಲ. ಆಗ ಬಾಲಕರಿಬ್ಬರೂ ಹೊರಟು ಯಮ ಲೋಕವನ್ನು ಸೇರಿ ದ್ವಾರದಲ್ಲಿ ಶಂಖವನ್ನು ಊದಿದರು. ಆಗ ಯಮಧರ್ಮರಾಜನು ನಿಜ ಸಂಗತಿಯನ್ನರಿತು ತನ್ನೊಡನಿದ್ದ ಗುರು ಪುತ್ರನನ್ನೂ ತ್ವರಿತವಾಗಿ ಕರೆದುಕೊಂಡು ಬಂದು ಅವರಿಗೆ ಸಮರ್ಪಿಸಿ ಆ ಬಾಲಕರನ್ನು ಅನೇಕ ವಿಧಗಳಲ್ಲಿ ಸತ್ಕರಿಸಿ ಪೂಜಿಸಿದನು.

ನಂತರ ಕೃಷ್ಣ ಬಲರಾಮರು ಹಿಂತಿರುಗಿ ಸಾಂದೀಪನಿಗೆ ಅವರ ಪುತ್ರನನ್ನು ಕಾಣಿಕೆಯಾಗಿ ಸಮರ್ಪಿಸಲು ಆ ಗುರು ದಂಪತಿಗಳು ಅಪರಿಮಿತ ಆನಂದ ಭರಿತರಾಗಿ ಅವರನ್ನು ಆಶೀರ್ವದಿಸಿ ಅವರ ತಂದೆ ತಾಯಿಗಳಿದ್ದಲ್ಲಿಗೆ ಕಳುಹಿಸಿ ಕೊಟ್ಟರು.

ಈ ರೀತಿ ಕೃಷ್ಣ ಬಲರಾಮರು ತಮ್ಮ ಕರ್ತವ್ಯ ಪೂರೈಸಿ ಕೃತಕೃತ್ಯರಾಗಿ ಆನಂದದಿಂದ ಮಧುರೆಯನ್ನು ಸೇರಿದರು.

## ಮಾತಿನ ಮರ್ಮ

ಒಂದು ಊರಿನಲ್ಲಿ ಒಬ್ಬ ರಾಜನಿದ್ದನು. ಒಂದು ದಿನ ಅವನು ತನ್ನ ಮಂತ್ರಿ ಮತ್ತು ಒಬ್ಬ ಸೈನಿಕನೊಡನೆ ಬೇಟೆಯಾಡಲು ಕಾಡಿಗೆ ಹೋದನು. ತುಂಬಾ ಸಮಯವಾದರೂ ಅವರಿಗೆ ಒಂದು ಪ್ರಾಣಿಯಾದರೂ ಸಿಗಲಿಲ್ಲ. ಹಾಗೆಯೇ ಹಿಂದಿರುಗುವ ಸಮಯದಲ್ಲಿ ಅವರಿಗೆ ನಿರಾಶೆಯಲ್ಲಿ ಆಶೆ ಹುಟ್ಟುವಂತಾಯಿತು. ಅವರಿಗೆ ಮೂರು ಜಿಂಕೆಗಳು ಕಂಡುಬಂದವು. ಕುದುರೆಗಳ ಕಾಲಿನ ಗೊರಸುಗಳ ಶಬ್ದವನ್ನು ಕೇಳಿದಕೂಡಲೇ ಜಿಂಕೆಗಳು ಸಿಕ್ಕಿದೆಡೆಗೆ ಓಡಿಹೋದವು. ಮೂವರೂ ಅವುಗಳನ್ನು ಹಿಂಬಾಲಿಸಿ ಹೋದರು. ಹಾಗೆಯೇ ಅವರು ಒಬ್ಬರನ್ನೊಬ್ಬರು ಅಗಲಿದರು. ಮತ್ತೆ ಸಂಧಿಸಲು ಹುಡುಕುತ್ತಾ ಹೋದರು.

ಮೊದಲು ಸೈನಿಕನು ಒಂದು ದಾರಿಯಾಗಿ ಹೋಗಲು, ಅವನಿಗೆ ಒಂದು ಗುಡಿಸಿಲಿನಲ್ಲಿ ಒಬ್ಬ ಕುರುಡನಾದ ಮುನಿಯು ಕಂಡನು. ಆಗ ಸೈನಿಕನು ಮುನಿಯನ್ನು ಕುರಿತು, "ಎಲೈ ಅಂಧನೇ, ಈ ದಾರಿಯಾಗಿ ಯಾರಾದರೂ ಹೋಗಿರುವರೇ" ಎಂದನು. ಮುನಿಯು ಇಲ್ಲವೆಂದನು. ಸೈನಿಕನು ಮುಂದೆ ಹೊರಟನು. ಸ್ವಲ್ಪ ಸಮಯದಲ್ಲಿ ಮಂತ್ರಿಯೂ ಆ ದಾರಿಯಾಗಿ ಬಂದನು. ಅವನು ಮುನಿಯೊಡನೆ, "ಎಲೈ ಮುನಿಯೇ, ಹೀಗಿಂದ ಯಾರಾದರೂ ಹೋಗಿರುವರೇ" ಎಂದನು. ಆಗ ಮುನಿಯು "ಸ್ವಲ್ಪ ಮುಂಚೆ ಈ ದಾರಿಯಲ್ಲಿ ಸೈನಿಕನು ಹೋಗಿರುವನು" ಎಂದು ಹೇಳಿದನು. ಮಂತ್ರಿಯೂ ಮುಂದಕ್ಕೆ ಹೊರಟನು. ಮತ್ತೆ ಸ್ವಲ್ಪ ಸಮಯ ಕಳೆಯಿತು. ಅಷ್ಟರಲ್ಲಿ ರಾಜನೂ ಆ ದಾರಿಯಾಗಿ ಬಂದು, ನಮ್ರತೆಯಿಂದ "ಮುನಿವರ್ಯನೇ, ಇಲ್ಲಿಂದ ಯಾರಾದರೂ ಹೋಗಿರುವರೇ" ಎಂದನು. ಆಗ ಮುನಿಯು, "ಎಲೈ ರಾಜನೆ, ಒಬ್ಬ ಸೈನಿಕನೂ ನಂತರ ಮಂತ್ರಿಯೂ ಹೋಗಿರುವರು" ಎಂದನು. ರಾಜನೂ ಮುಂದಕ್ಕೆ ಹೊರಟನು.

ಸ್ವಲ್ಪ ಹೊತ್ತಿನಲ್ಲಿ ರಾಜ, ಮಂತ್ರಿ ಸೈನಿಕ ಮೂವರೂ ಒಟ್ಟು ಸೇರಿದರು. ಮೂವರಿಗೂ ಮುನಿಯ ಮಾತನ್ನು ನೆನೆಸಿಕೊಂಡು ಆಶ್ಚರ್ಯವಾಯಿತು. ಕುರುಡನಿಗೆ ರಾಜ, ಮಂತ್ರಿ, ಸೈನಿಕರೇ ಹೋದರೆಂದು ಹೇಗೆ ಗೊತ್ತಾಯಿತೆಂದು. ರಾಜನು ಮುನಿಯ ಹತ್ತಿರ ಹೋಗಿ "ಮುನಿವರ್ಯನೇ, ನಮ್ಮಲ್ಲಿ ಒಬ್ಬನು ಮಂತ್ರಿಯೆಂದೂ, ಒಬ್ಬನು ಸೈನಿಕನೆಂದೂ, ನಾನು ರಾಜನೆಂದೂ ಹೇಗೆ ತಿಳಿದೆ?" ಎಂದು ಕೇಳಿದನು. ಆಗ ಋಷಿಯು "ಎಲೈ ರಾಜನೇ, ನಾನು ನಿಮ್ಮ ಮಾತುಗಳಿಂದಲೇ ನೀವು ಯಾರಾರೆಂಬುದನ್ನು ಗುರುತಿಸಿದೆ. ಸೈನಿಕನು 'ಅಂಧನೇ' ಎಂದು ಗುಡುಸಾಗಿ ಸಂಬೋಧಿಸಿದಾಗಲೇ ಅವನ ಅಂತಸ್ತು ತಿಳಿಯಿತು. ಮಂತ್ರಿಯು 'ಮುನಿಯೇ' ಎಂದೂ, ನೀನು 'ಮುನಿವರ್ಯನೇ' ಎಂದೂ, ನನ್ನನ್ನು ಸಂಬೋಧಿಸಿದಿರಿ. ಇದರಿಂದಲೇ ನಾನು ನಿಮ್ಮ ಅಂತಸ್ತುಗಳನ್ನು ಗುರುತಿಸಿ ಯಾರಾರೆಂದು ಊಹಿಸಿದೆ" ಎಂದನು.

—ಎಂ. ದೇವದಾಸಕಾಮತ್.

ಒಗಟಿಗೆ ಉತ್ತರಗಳು: 1. ಗಿಣಿ, 2. ಚಿಕ್ಕು, 3. ನವಿಲಿನ ಗರಿ, 4. ಅಡಿಕೆಯ ಬೇರು, ಮರ, ಅಡಿಕೆ, ಹೂವು, 5. ಕಣ್ಣು, 6. ಪಡವಲಕಾಯಿ, 7. ಗಾಣ, 8. ವಿಮಾನ.

ಹೆಸರೇನುವಿಗೆ ಉತ್ತರ: 1. ಜವಾಹರಲಾಲ ನೆಹರು. 2. ಸಂಗೀತ.

ನಾನ್ಯಾರಿಗೆ ಉತ್ತರ: ಹೊಗೆಬಂಡಿ




## ಇಸ್ಪೀಟು ಎಲೆ ಗುಲಾಬಿ ಹೂವಿನಂತೆ ಬದಲಾಯಿಸುವುದು.

ಈ ಟ್ರಿಕ್ ಮಾಡಬಲ್ಲೆವೆಂದು ನಿಜವಾಗಿ ನೀವು ನಂಬಲಾರಿರಿ, ಅಲ್ಲವೆ? ಹೌದು. ಇದರ ಗುಟ್ಟು ಅರಿಯುವ ವರೆಗೆ ನೀವು ನಂಬುವುದೇ ಇಲ್ಲ. ರಹಸ್ಯ ತಿಳಿದ ಮೇಲೆ ನೀವೇ ಆಶ್ಚರ್ಯ ಪಡುವಿರಿ.

ಇಸ್ಪೀಟು ಎಲೆಯನ್ನು ಎಡಗೈಯಲ್ಲಿಹಿಡಿದುಕೊಂಡು, ಅಂಕಿಗಳು ಕಾಣಿಸುವ ಕಡೆ ಪ್ರೇಕ್ಷಕರಿಗೆ ಮಾಂತ್ರಿಕನು ತೋರಿಸುತ್ತಾನೆ. ಪ್ರೇಕ್ಷಕರು ಪರಿಶೀಲಿಸಿ ನೋಡಿದನಂತರ ಆತನು ಇಸ್ಪೀಟು ಎಲೆಯಿರುವ ಎಡಗೈಯನ್ನು ಬಲಗೈಯಿಂದ ಮುಚ್ಚಿ, ಮರುಕ್ಷಣವೇ ಕೈ ತೆಗೆದು ಬಿಡುತ್ತಾನೆ. ಅರೆ! ಇದೇನು ವಿಚಿತ್ರ? ಇಸ್ಪೀಟು ಎಲೆ ಮಾಯವಾಗಿ ಅದರ ಸ್ಥಾನದಲ್ಲಿ ಬಂದು ಗುಲಾಬಿ ಹೂ ಕಾಣಿಸುತ್ತದೆ! 'ಇದು ಹೇಗೆ ಸಾಧ್ಯ?' ಎಂದರೆ, ಇದೋ ಹೀಗೆ.

ಪ್ರೇಕ್ಷಕರಿಗೆ ನೀನು ತೋರಿಸುವ ಇಸ್ಪೀಟು ಎಲೆ ಸಾಮಾನ್ಯವಾಗಿರುವ ಎಲೆಯಲ್ಲ. ಮನೆಯಲ್ಲಿ ಸಿದ್ಧಪಡಿಸಿಕೊಂಡು ಬಂದಿರುವ ವಿಶೇಷ ರೀತಿಯ ಎಲೆ. ಇದು ಯಾವರೀತಿ ಇರಬೇಕೆಂಬುದನ್ನು ಚಿತ್ರದಲ್ಲಿ ನೋಡು. ಇಸ್ಪೀಟು ಎಲೆಯನ್ನು ಅಡ್ಡಡ್ಡವಾಗಿ ಮೂರು ಸಮ ಭಾಗಗಳನ್ನಾಗಿ ಮಡಿಚು. ತರುವಾಯ ಎಲೆಯ ಹಿಂದುಗಡೆ ಮಧ್ಯ ಭಾಗದಲ್ಲಿ ಸಿಲ್ಕಿನಿಂದಾಗಲೀ ಸೆಲ್ಯುಲಾಯಿಡ್ ನಿಂದಾಗಲೀ ತಯಾರಿಸಿರುವ ಒಂದು ಗುಲಾಬಿ ಹೂವನ್ನು ಅಂಟಿಸು. (ಇಂತಹ ಗುಲಾಬಿ ಹೂಗಳು ಸಿಗುವ ಸ್ಥಳ ನಿಮಗೆ ತಿಳಿದೇ ಇರಬೇಕು) ಹೀಗೆ ಸಿದ್ಧಪಡಿಸಿಕೊಂಡಿರುವ ಇಸ್ಪೀಟು ಎಲೆಯೊಂದಿಗೆ ಸಭೆಗೆ ಬರಬೇಕು.



ಸಭೆಗೆ ಬಂದ ಮೇಲೆ ಮಡಿಚಿರುವ ಗುರುತು ಕಾಣಬರದಂತೆ ಇಸ್ಪೀಟು ಎಲೆಯನ್ನು ಅಂಕಿಗಳಿರುವ ಕಡೆ ಪ್ರೇಕ್ಷಕರಿಗೆ ತುಸ ದೂರದಿಂದ ತೋರಿಸು. ಅವರು ನೋಡಿದ ತರುವಾಯ ಬಲಗೈಯಿಂದ ಆ

ಎಲೆಯನ್ನು ಮುಚ್ಚುತ್ತಾ ಕೆಳಗಿನ ಭಾಗವನ್ನು ಹೆಬ್ಬೆಟ್ಟಿನಿಂದಲೂ, ಮೇಲಿನ ಭಾಗವನ್ನು ಕಿರುಬೆರಳಿನಿಂದಲೂ ಮಡಿಚಿ, ಗುಲಾಬಿ ಪುಷ್ಪ ಅಂಟಿಸಿರುವ ಕಡೆ ಮೇಲೆ ಬರುವಂತೆ ತಿರುಗಿಸು. ಇದೆಲ್ಲಾ ರೆಪ್ಪೆ ಬಡಿಯುವಷ್ಟರಲ್ಲಿ ನಡೆಯಬೇಕು. ಹೀಗೆ ಮಾಡಿ ನಿನ್ನ ಬಲಗೈಯನ್ನು ತೆಗೆದು ಬಿಡು. ಪ್ಯಾಕ್ ಎಲೆಗೆ ಬದಲಾಗಿ ಒಂದು ಗುಲಾಬಿ ಕಾಣುತ್ತದೆ.

ಈ ಯುಕ್ತಿ ಮಾಡಬೇಕಾದರೆ ಗಮನಿಸಬೇಕಾದ ವಿಷಯಗಳು ಎರಡೇ ಎರಡು. ನೀನು ಪ್ಯಾಕ್ ಎಲೆಯನ್ನು ಮಡಿಚಿರುವ ಗುರುತು ಪ್ರೇಕ್ಷಕರ ಕಣ್ಣಿಗೆ ಕಾಣಿಸದಷ್ಟು ಸೂಕ್ಷ್ಮವಾಗಿರಬೇಕು. ತರುವಾಯ ಎಲೆಯನ್ನು ಮಡಿಚಿ, ತಿರುಗಿಸಿ ಹಿಡಿಯುವಾಗ ಪ್ರೇಕ್ಷಕರಿಗೆ ಅನುಮಾನ ಬರದಂತೆ ಚಾಕಚಕ್ಯತೆಯಿಂದಕೆಲವೇ ಸೆಕೆಂಡುಗಳಲ್ಲಿ ಮಾಡಬೇಕು. ಇದೇನಷ್ಟು ಕಷ್ಟವಲ್ಲ. ಒಂದೆರಡು ಸಾರಿ ಮಾಡಿ ನೋಡಿದರೆ ಈ ಟ್ರಿಕ್ ಕಷ್ಟವಲ್ಲವೆಂದು ನಿಮಗೇ ತಿಳಿಯುತ್ತದೆ.



ಇದೇ ರೀತಿ ಇಸ್ಪೀಟು ಎಲೆಯನ್ನು ರೈಲ್ವೆ ಟಿಕೀಟಿನಂತೆಯಾಗಲೀ, ಬೆಂಕಿ ಪೆಟ್ಟಿಗೆಯಂತಾಗಲೀ ಬದಲಯಿಸಬಹುದು. ಇವುಗಳಿಗೆಲ್ಲಾ ಒಂದೇ ಮಂತ್ರ.

(ಪಾಠಕರು ಈ ಗಾರುಡಿಯನ್ನು ಕುರಿತು ಸಲಹೆ ಪಡೆಯಬೇಕೆಂದರೆ ಅವರು 'ಚಂದಮಾಮ' ನ ಹೆಸರು ಸೂಚಿಸಿ ಪ್ರೊಫೆಸರಿಗೆ ಇಂಗ್ಲೀಷಿನಲ್ಲಿ ಪತ್ರ ಬರೆಯಬೇಕು. ಅವರ ವಿಳಾಸ:
ಪ್ರೊಫೆಸರ್. ಪಿ. ಸಿ. ಸರ್ಕಾರ್ ಮೆಜಿಷಿಯನ್,
ಪೋಸ್ಟ್ ಬಾಕ್ಸ್ 7878. ಕಲಕತ್ತಾ 12)

## ಪುಟ್ಟ ಮುದ್ದು

ಮುದ್ದು ಎಂದು ಅವನ ಹೆಸರು
ಅವನ ಅಂಗಿ ಬಣ್ಣ ಹಸಿರು
ಅವಗೆ ಬೇಕು ಬಹಳ ಮೊಸರು
ಉಂಡೆಯಲ್ಲಿ ಅವನ ಉಸಿರು

ನಸುಕಿನಲ್ಲಿ ಬೇಗ ಎದ್ದು
ಉಂಡೆ ಹುಡಕಿ ಮೊಸರು ಕದ್ದು
ತಿಂದು ಕೇಳದಂತೆ ಸದ್ದು
ಮತ್ತೆ ಮಲಗಿ ಬಿಡುವ ಮುದ್ದು

ಒಮ್ಮೆ ಮುದ್ದು ಎದ್ದು ಬಂದು
ಮೊಸರು ಕದ್ದು ಎಲ್ಲ ತಿಂದು
ಉಂಡೆ ಹುಡುಕುತಿರಲು ಒಂದು
ಇರುವೆ ಕಚ್ಚಿತವನಿಗಂದು

ಚೀರಿ ಬಿಟ್ಟ 'ಚೇಳು ಚೇಳು'
ಎಲ್ಲರೆದ್ದು 'ಎಲ್ಲಿ ಹೇಳು?'
ಎನ್ನುವಾಗ ತನ್ನ ಗೋಳು
ನೆನೆದು ಬಯ್ದ 'ಉಂಡೆ ಹಾಳು'

ಕಂಡು ಅವನ ಮೊಸರ ಬಾಯಿ
ಬಹಳ ನಕ್ಕಳವನ ತಾಯಿ
ಕೂಗು ಕೇಳಿ ಬಂದ ನಾಯಿ
ನಗುತಲಿತ್ತು ತೆರೆದು ಬಾಯಿ

—ಎಂ. ಶಂಕರ.

## ಚುಟಕ

ಪೇಟೆಯಲ್ಲಿ ತಿಂಡಿ
ರೊಕ್ಕ ಕೊಟ್ಟು ಕೊಂಡಿ
ತಿಂದು ಅದನು
ಬಹಳ ಬೇಗ
ರೋಗ ಹಚ್ಚಿಕೊಂಡಿ!

—ಸಿ. ಎನ್. ಕೋಟಿ.




ಈ ಚಿತ್ರದಲ್ಲಿ ಎಲ್ಲೆಲ್ಲಿ ಯಾವ ಬಣ್ಣಗಳನ್ನು ಹಾಕಬೇಕೋ ನೋಡಿ ಹಾಕಿರಿ. ಮುಂದಿನ ತಿಂಗಳ ಚಂದಮಾಮದಲ್ಲಿ ನಾವು ಹಾಕುವ ಅದೇ ಬಣ್ಣದ ಚಿತ್ರದೊಂದಿಗೆ ಹೋಲಿಸಿ ನೋಡಿ.

Controlling Editor : SRI CHAKRAPANI
Printed and Published by B. NAGI REDDI at the B. N. K. Press, Madras-1.



Chandamama February '51 Photo by B. Ranganadham

ನೆಟ್ಟ ಗುರಿ

CHANDAMAMA (Kannada) FEB. 1951 Regd. No. M. 5210




‘ಲೋ! ನಾನೂ ಗುಳ್ಳೆ ಮಾಡ್ತೀನಿ ಕಣೋ!’